## ಭಾರತೀ ಪ್ರಕಾಶನ ಮಂದಿರದ

## ಮುಂಬರುವ ಪುಸ್ತಕಗಳು

೧ ಪಡಿನೆಳಲು (ನಾಟಕ)

೨ ಪ್ರತಿಧ್ವನಿ ,,

೩ ನಾಳಿನ ಬಾಳು

೪ ಅಂತರಗಂಗೆ (ಕತೆಗಳು)

೫ ಸಂಪಾದಕ (ಕಾದಂಬರಿ)

೬ ಅಗ್ನಿಸಂತರ್ಪಣೆ (ಕಾದಂಬರಿ)

೭ ಕರ್ನಾಟಕದ ಆರ್ಥಿಕ ಸಮಸ್ಯೆಗಳು

೮ ಉತ್ತರ ಕನ್ನಡದ ಉದ್ಧಾರ

೯ ರಾವುಗನ್ನಡಿ (ಪ್ರಪಂಚದ ಅದ್ಭುತ ಸಂಗತಿಗಳ ಸಂಕಲನ)

೧೦ ಚೆಲುವ ಕನ್ನಡನಾಡು (ಕರ್ನಾಟಕದ ಸೌಂದರ್ಯ-ಸ್ಥಾನಗಳ ಪ್ರವಾಸ ವರ್ಣನೆ)

*With Best Compliments from the Publishers*

# ನೆರಳು–ಬಿಸಿಲು

(ಎರಡು ಏಕಾಂಕಗಳು)

# ಅರ್ಪಣ-ತರ್ಪಣ

ನಾಲ್ವತ್ತೆರಡರ ನಾಡಯಜ್ಞದಲ್ಲಿ ನಮ್ಮ ಮಲ್ಲಪ್ಪ ನಂತೆ, ಸ್ವಾತಂತ್ರ್ಯಕ್ಕಾಗಿ ಮಡಿದ ಕರ್ನಾಟಕದ ವೀರ ಹುತಾತ್ಮರ,

ಹಾಗು

ಇಂದಿನ ಬಾಳ-ಮುಳುಕನ್ನು ಕಸಿದು ಜಗತ್ತಿ ಗೊಂದು ಹೊಸ ಬೆಳಕನ್ನು ನೀಡಲು ಹವಣಿಸಿದ ಮಹಾತ್ಮರ

ಪುಣ್ಯ-ಸ್ಮರಣೆಗೆ ಮುಡಿಪು

# ನೆರಳು–ಬಿಸಿಲು

ಕೃಷ್ಣಕುಮಾರ

1948



ಭಾರತೀ ಪ್ರಕಾಶನ ಮಂದಿರ

ದಾದರ ಮುಂಬಯಿ

ಬೆಲೆ: ರೂ. ೧

ಮುದ್ರಕರು :
ಶೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ

ಪ್ರಕಾಶಕರು :
**ಭಾರತೀ ಪ್ರಕಾಶನ ಮಂದಿರ**
೧೦, ಬಿಸಮಿಲ್ಲಾ ಬಿಲ್ಡಿಂಗ, ೧ ನೇ ಮಾಳಿಗೆ
ದಾದರ (ಬಿ. ಬಿ. ಸ್ಟೇಶನ್ನಿನೆದುರು), ಮುಂಬಯಿ

ಈ ಪುಸ್ತಕಗಳು ಸಿಕ್ಕುವ ಸ್ಥಳ :—

೧ ಕರ್ನಾಟಕ ಕನ್‌ಸರ್ನ್ಸ ಲಿಮಿಟೆಡ್, ಮುಂಬಯಿ ೧೪
೨ ಸಾಧನ ಮುದ್ರಣಾಲಯ, ಧಾರವಾಡ
೩ ಜೀವನ ಪುಸ್ತಕಾಲಯ, ಧಾರವಾಡ, ಹಾಗೂ
೪ ಭಾರತೀ ಪ್ರಕಾಶನ ಮಂದಿರ, ಮುಂಬಯಿ



# ಮೊದಲ ಮಾತುಗಳು

ಕನ್ನಡ ಹಾಗೂ ಇನ್ನಿತರ ಪ್ರಧಾನ ಭಾರತೀಯ ಸಾಹಿತ್ಯಗಳಲ್ಲಿ ಕಂಡುಬರುವ ಶಾಸ್ತ್ರೀಯ ಹಾಗು ಸಾಂಸ್ಕೃತಿಕ ಸ್ವರೂಪದರ್ಶನವನ್ನು ನಮ್ಮ ಜನತೆಗೆ ಮಾಡಿಸುವದಕ್ಕೋಸುಗ, ಔಪಯೋಗಿಕ, ವ್ಯಾವಹಾರಿಕ ಹಾಗೂ ಜ್ಞಾನಾತ್ಮಕವಾದ ಸಾಹಿತ್ಯವನ್ನೊಳಗೊಂಡ ಒಂದು ಯೋಜನಾಬದ್ಧವಾದ ಪ್ರಕಟನಾಕಾರ್ಯವನ್ನು ಕೈಕೊಳ್ಳುವುದೇ **ಭಾರತೀ ಪ್ರಕಾಶನ ಮಂದಿರ**ದ ಪ್ರಥಮೋದ್ದೇಶ.

ಇದೀಗ ಪ್ರಕಟವಾಗಿರುವ "ನೆರಳು -ಬಿಸಿಲು" ಎಂಬೀ ಏಕಾಂಕ ಸಂಗ್ರಹ "ಸುಗ್ಗಿಯ ತೆನೆಗಳು" ಎಂಬ ನಮ್ಮ ಪುಸ್ತಕ ಮಾಲೆಯಲ್ಲಿ ಮೊದಲನೆಯದು. ತಮ್ಮ ಸಂಣ ಕತೆಗಳ ಹಾಗು ಏಕಾಂಕ ಸಂಗ್ರಹಗಳ ಮೂಲಕ ಕನ್ನಡಿಗರಿಗೆ ಸುಪರಿಚಿತರಾದ ಶ್ರೀ. ಕೃಷ್ಣಕುಮಾರರ ಈ ಕೃತಿಯನ್ನು ಕನ್ನಡಿಗರಿಗೆ ಸಲ್ಲಿಸಲು ನಮಗೆ ತುಂಬ ಆನಂದವಾಗುತ್ತದೆ. ಇಲ್ಲಿರುವ ಎರಡೂ ಏಕಾಂಕಗಳಲ್ಲಿ ನೆರಳೂ ಇದೆ, ಬಿಸಿಲೂ ಇದೆ ಎಂದು ನಾಟಕಕಾರರ ಹೇಳಿಕೆ.

ಮೊದಲನೆಯದಾದ 'ತಿರುಗುಪ್ಪ' -ಅಥವ- 'ಜಾಗೃತ ರಾಷ್ಟ್ರ ಎಂಬದು, ಐರ್ಲಂಡದ ಸ್ವಾತಂತ್ರ್ಯದ ಹೋರಾಟದ ವಿಷಯಕವಾದ ಒಂದು ನಾಟಕವನ್ನೋದಿದಮೇಲೆ, ೧೯೪೨ರಲ್ಲಿ ಹಿಂದುಸ್ತಾನದಲ್ಲೂ ಅದೇ ಮಾದರಿಯ ಹೋರಾಟ ನಡೆದುದನ್ನು ಕಣ್ಣಾರೆಕಂಡಾಗ, ನಮ್ಮ ನಾಡ ಜನರ ತ್ಯಾಗ, ಆತ್ಮಾಹುತಿಗಳು ಬೇರೆ ಯಾವ ದೇಶಕ್ಕೂ ಕಡಮೆಯವಲ್ಲ ಎಂದು ಮನಗಂಡಾಗ, ಆ ಹೋರಾಟದಿಂದ ಸ್ಫೂರ್ತಿಗೊಂಡು ಬರೆದದ್ದು.

ಎರಡನೆಯದು ಅಮೇರಿಕೆಯ ಪ್ರಸಿದ್ಧ ನಾಟಕಕಾರರಾದ Clifford Bax ಎಂಬವರ "The Cloak" ಎಂಬ ಚಿಕ್ಕ ನಾಟಕವನ್ನು ಅನುಸರಿಸಿ ಬರೆದುದು. ಇದು ಭಾಷಾಂತರವೂ ಅಲ್ಲ; ಭಾವಾನುವಾದವೂ ಅಲ್ಲ; ಒಂದು ಪ್ರತಿನಿರೂಪಣೆ. ಬ್ಯಾಕ್ಸರು ಇದಕ್ಕೆ Modern Mystery Play ಎಂದು ಕರೆದಿದ್ದಾರೆ. ಆಧುನಿಕ ಜನಾಂಗಗಳ ಜೀವನಕ್ಕೆ ಹುಳ

ಹತ್ತಿದಂತಿದ್ದ ರಾಕ್ಷಸೀಮಹತ್ವಾಕಾಂಕ್ಷೆಗೆ ಇಂದಿನ ಮನುಷ್ಯವರ್ಗ ಹೇಗೆ ತೊತ್ತಾಗಿದೆ ಎಂಬದನ್ನು ತೆರೆದು ತೋರುವದೇ ಈ ನಾಟಕದ ಹುರುಳು. ಹೀಗೆ ಹುಳಹತ್ತಿದಂತಿದ್ದ ಇಂದಿನ ಜಗತ್ತಿನಲ್ಲಿ ಹಿಟ್ಲರನಂಥವರು ಒಬ್ಬರಲ್ಲ ಹತ್ತರಂತೆ ಹುಟ್ಟಿದರೆ ಆಶ್ಚರ್ಯವಲ್ಲವೆಂಬದೇ ಈ ನಾಟಕದ ಧ್ವನಿ.

"ತಿರುಗುಪ್ಪಿ" ನಲ್ಲಿ ಸ್ವಾತಂತ್ರ್ಯೋನ್ಮುಖ ಜನಾಂಗದ ಉದಾತ್ತ ಆತ್ಮಯಜ್ಞದ ಚಿತ್ರವಿದ್ದರೆ, "ಮುಸುಕಿ" ನಲ್ಲಿ ಇಂದಿನ ಮುಂದರಿದ(?) ರಾಷ್ಟ್ರಗಳ ಪಾಶವೀ ವೃತ್ತಿಯ ವಿಕೃತ ಚಿತ್ರದ ನಿರೂಪಣೆಯಿದೆ. ಒಟ್ಟಾರೆ ಎರಡೂ ನಾಟಕಗಳಲ್ಲಿ ನೆರಳಿಗಿಂತ ಬಿಸಿಲು ಹೆಚ್ಚು ಎನ್ನಬಹುದು. ತಿರುಗುಪ್ಪಿ ನಮ್ಮ ನಾಡ-ಜನತೆಯ ವಿಶಿಷ್ಟ ರೀತಿಯ ಆತ್ಮಾಹುತಿಯ ನಿರೂಪಣೆ. ಅದರಲ್ಲೂ ನಮ್ಮ ಹಳ್ಳಿಗರ ಹೆಮ್ಮೆಯ ಹೋರಾಟದ ಪಡಿಯಚ್ಚು ಅದು. "ಮುಸುಕು" ಅನುಕರಣೆ ನಿಜ; ಆದರೆ ಅದಕ್ಕೆ ಪೌರ್ವಾತ್ಯ ಭಾವನೆಗಳ ಹಾಗು ಸಂನಿವೇಶಗಳ ಹಿನ್ನೆಲೆ ಇಡಲಾಗಿದೆ. ತಿರುಗುಪ್ಪಿನ ಭಾಷೆ ಉತ್ತರ ಕರ್ನಾಟಕದ ಹಳ್ಳಿಯ ಭಾಷೆಯಾದರೂ, ಮುಂಬಾಯಿಯಲ್ಲಿ ಮೊದಲ ಸಲ ಈ ನಾಟಕ ಪ್ರಯೋಗಿಸಲ್ಪಟ್ಟಾಗ ಮೈಸೂರು-ಮಂಗಳೂರುಗಳ ಜನರೂ ಇದನ್ನು ತುಂಬಾ ಮೆಚ್ಚಿದ್ದು ನಾವು ಕಣ್ಗಂಡ ಮಾತಾಗಿದೆ.

ಈ ಎರಡೂ ಏಕಾಂಕಗಳು ಆವಿದ್ಧ ನಾಟಕಗಳೇ (Tragedy) ಎನ್ನಬಹುದು. ಎರಡರಲ್ಲೂ ನಿರ್ವೇದದ ನೆರಳಿದೆ; ನೆರಳಿಕೆ ಇದೆ. ಆದರೆ ದುಃಖವಿದ್ದ ಮಾತ್ರಕ್ಕೇ ನಾಟಕ ಬೇಸರವಾಗುವದಿಲ್ಲ. ಈ ಎರಡರಲ್ಲೂ ನೆರಳನಾಚೆಯ ಬಿಸಲಂತೆ, ಆತ್ಮಶಕ್ತಿಯ ಕೆಚ್ಚು, ಹವ್ಯಾಸ, ಹುಮ್ಮಸಗಳ ಹೋರಾಟವೂ ಇದೆ. ಹೆರವರ ದುಃಖದ ಗುಡ್ಡವನ್ನು ಕಂಡಾಗ ನಮ್ಮದು ಕಡ್ಡಿಯೆಂಬರಿವಾಗಿ, ನೊಂದ ಮನ ಸ್ವಲ್ಪಾದರೂ ಅರಳುವದುಂಟು. ಆವಿದ್ಧ ಕೃತಿಗಳ ಉದ್ದೇಶ ನೋವಿನ ಉದ್ದೀಪನವಲ್ಲ; ಆದರೆ ಅದನ್ನು ಉತ್ತರಿಸಬಲ್ಲ ಭಾವವನ್ನು ಎಚ್ಚರಿಸುವುದು. ಒಬ್ಬ ಆಂಗ್ಲ ವಿದ್ವಾಂಸರು ಈ ವಿಷಯದಲ್ಲಿ ಹೀಗೆಂದಿದ್ದಾರೆ:— "Tragedy is a peculiar sense of some one eles's pain....Such a play never

saddens, but rather thrills and gladdens the mind At the lowest, our response to it is— 'Well, after all, what are my troubles to that?' ...." ರಾಮಾಯಣ ಭಾರತಗಳಲ್ಲಿ ಹುದುಗಿದ ದುಃಖ ಈ ಮಾತಿಗೇ ನಿದರ್ಶನವಾಗಿದೆಯೆನ್ನಬಹುದು. ಈ ಎಲ್ಲ ದೃಷ್ಟಿಗಳಿಂದ ಇಲ್ಲಿಯ ಎರಡೂ ನಾಟಕಗಳಲ್ಲಿಯ ನೆರಳು-ಬಿಸಿಲುಗಳೆರಡೂ ಸಹೃದಯ ವಾಚಕರಿಗೆ ಹಿತಮಿತವಾದುವೆಂಬ ಆಸೆಯಿದೆ.

ಇದು ನಮ್ಮ ಪ್ರಥಮ ಪ್ರಯತ್ನ; ಮುಂಬಾಯಿಯಲ್ಲಿ ಇಂಥ ಎತ್ತುಗಡೆಗಳಿಗೆ ಅಪರಿಮಿತ ಆಸ್ಪದವಿದೆ. ಈ ದಾರಿಯಲ್ಲಿ ನಮ್ಮಿಂದ ಸರಿಯಾದ ಯತ್ನ ನಡೆದು ಕನ್ನಡಿಗರಿಂದ ಪೂರ ಬೆಂಬಲ ದೊರೆತರೆ ನಮ್ಮೀ ಹಂಬಲ ಸಾಧ್ಯ.

ಮುಂಬಾಯಿ
೧೫—೬—೧೯೪೮

ಪ್ರಕಾಶಕರು

---

## ಪರಿವಿಡಿ



---

* 'ತಿರುಗುಪ್ಪು' ಎಂಬುದು 'ತಿಳ್ಳಿ' ಅಥವ 'ಸರಮುಸಿ' ಆಟದಲ್ಲಿ ಬರುವ ಮಾತು. ಆಟದಲ್ಲಿ ಅರ್ಧ ಗೆಲವು ಕೈಸೇರಿದಾಗ 'ಉಪ್ಪು' ತಿರುಗುವದು. ಆ ಆಟದಲ್ಲಿ "ತಿರುಗುಪ್ಪು" "Zero Hour" ಇದ್ದ ಹಾಗೆ; ಆ ಅರ್ಥದಲ್ಲೇ ಈ ನಾಟಕಕ್ಕೆ ಹೆಸರಿಡಲಾಗಿದೆ.

# ತಿದ್ದುಪಡಿ

| ಪುಟ | | ಸಾಲು | ತಪ್ಪು | ಒಪ್ಪು |
|---|---|---|---|---|
| ೨ | | ೩ | ಮುಸದಲ್ಲಿ | ಮೊಗದಲ್ಲಿ |
| ೧೨ | (ಕೆಳಗಿನಿಂದ) | ೩ | ಫ್ಯ್ಯಾ ಫ್ಯ್ಯಾ | ಫ್ಯಾ, ಫ್ಯಾ, |
| ೧೯ | | ೫ | ಅವಳ | ಅವಳು |
| ೨೦ | (ಕೆಳಗಿನಿಂದ) | ೨ | ಅಷ್ಟು | ಎಷ್ಟು |
| ೨೧ | | ೮ | ಮಕಳ | ಮಕ್ಕಳ |
| ೨೬ | | ೧೪ | ನಾಯಿಲ್ಲಿದ್ದೇನು | ನಾಯೆಲ್ಲಿದ್ದೇನು |
| ೪೧ | (ಕೆಳಗಿನಿಂದ) | ೧೨ | ಮಂದಮಗನಿಗೆ | ಮಂದಗಮನಿಗೆ |
| ೪೩ | ,, | ೧೧ | ಗುದ್ದಾ | ಗುದ್ದು |
| ೪೪ | ,, | ೧೨ | ಬಗೆಯುತ್ತ | ಬಗಿಯುತ್ತ |
| ೪೬ | ,, | ೧೩ | ನಸ್ಯನ | ನಸ್ಯದ |
| ೫೧ | | ೧೧-೧೨ | ಕೆ ಮಾಡಿ | ಕೈಮಾಡಿ |
| ೬೩ | ಕೆಳಗಿನಿಂದ | ೫ | ಏಳೂರ ಗಡಿ | ಏಳೂರ ಗಡ |
| ೬೪ | | ೮ | ನಸ್ಯ | ನಸ್ನ |
| ೬೭ | | ೪ | ಮೊದಲೇ | ಮೊದಲ್ನೇ |
| ೭೦ | | ೬ | ಹೀರುತ | ಹೀರುತ್ತ |
| ೭೪ | | ೧ | ಜೀವಿಗಳು | ಜೀವಗಳು |
| ೮೦ | | ೪ | ಮುಸುಕನು | ಮುಸುಕನ್ನು |
| ೮೭ | | ೬ | ಬಾಳಿಲ್ಲಿ | ಬಾಳಿಲ್ಲ |

# ತಿರುಗುಪ್ಪು ಅಥವಾ ಜಾಗೃತರಾಷ್ಟ್ರ

| ಪಾತ್ರಗಳು (ಪ್ರವೇಶದ ಅನುಕ್ರಮದಲ್ಲಿ) | | ಮೊದಲ ಸಲ ಆಯಾ ಪಾತ್ರವಹಿಸಿದವರು |
|---|---|---|
| ೧ ನರಸಮ್ಮ | (೬೦ ವರ್ಷದ ಮುದುಕಿ: ಯರಗಟ್ಟಿ ಚಾವಂಗಡಿಯ ಒಡತಿ) | ಶ್ರೀ. ರಾಮಚಂದ್ರ ಹೂಲಿ |
| ೨ ಸೊಸೆ | (೨೦ ವರ್ಷದ ಆವಳ ಸೊಸೆ) | ಶ್ರೀಮತಿ ಗೋದಾವರಿ ಕುಲಕರ್ಣಿ |
| ೩ ಮಗದುಂ ಸಾಬ | (ಮೋಟಾರ ಡ್ರೈವರ್) | ಶ್ರೀ. ರಾಮಚಂದ್ರ ಬುರ್ಲಿ |
| ೪ ಹತ್ತರಿಕಿ ಮಲ್ಲಣ್ಣ | (ನರಸಮ್ಮನ ೨೫ ವರ್ಷದ ಮಗ; ೧೯೪೨ ರ ಚಳುವಳಿಯ "ಪುಂಡ" ತಂಡದ ಮುಖಂಡ) | ಶ್ರೀ. ಕೃಷ್ಣಕುಮಾರ |
| ೫ ಸುಪರಿಂಟೆಂಡೆಂಟ್ | (೫೬ ವಯಸ್ಸಿನ, ಜಿಲ್ಲಾ ಪೋಲಿಸು ಅಧಿಕಾರಿ) | ಶ್ರೀ. ಲಕ್ಷ್ಮೀಕಾಂತ ಇನಾಂದಾರ |
| ೬ ರಾಘಪ್ಪಗೌಡರು | (೩೦ ವಯಸ್ಸಿನ, ಯರಗಟ್ಟಿಯ ತಾತ್ಪೂರ್ತಿಕ ಪೋಲಿಸ ಪಟೀಲರು) | ಶ್ರೀ. ರಂಗನಾಥ ಕುಲಕರ್ಣಿ |

ಅಲ್ಲದೆ, ಸಿ. ಆಯ್. ಡಿ., ಪೋಲಿಸರು, ಪ್ಯಾಸೆಂಜರರು ಹಾಡುಗಾರರು ಇತ್ಯಾದಿ.

**ಕಾಲ: ೧೯೪೨ರ ಅಕ್ಟೋಬರ; (ಸಂಜೆ ೪ರಿಂದ ರಾತ್ರಿ ೨ರ ವರೆಗೆ)**

[ಸೂಚನೆ.— ಇಲ್ಲಿಯ ವ್ಯಕ್ತಿಗಳು ಕೇವಲ ಕಲ್ಪಿತ. ಸ್ಥಳನಿರ್ದೇಶ ಅನುಕೂಲಕ್ಕಾಗಿ ಮಾತ್ರ ಹೊಂದಿಸಿದ್ದು. ಅನುಕೂಲಕ್ಕಾಗಿಯೇ ಕೆಲ ಘಟನೆಗಳ ಕ್ರಮವಿಪರ್ಯಾಸವನ್ನೂ (Anachronism) ಬೇಕೆಂತಲೇ ಮಾಡಿದೆ. ಇಲ್ಲಿ ಸೂಚಿತವಾದ ಘಟನೆಯೇ ಮೊದಲಾದವುಗಳು ಇಲ್ಲಿ ಸೂಚಿಸಿದಂತೆಯೇ ನಡೆದಿರದಿದ್ದರೂ ಇಲ್ಲಿಯ ನಿರೂಪಣೆಯಲ್ಲಿ ಸತ್ಯಾಂಶವಿಲ್ಲದಿಲ್ಲ. ೧೯೪೨ ರಲ್ಲಿ ಕರ್ನಾಟಕದ ಹಲವೆಡೆಗಳಲ್ಲಿ ಈ ತೆರದ ಹಲವು ಘಟನೆಗಳೂ ಬಲಿದಾನಗಳೂ ನಡೆದುವೆಂಬುದು ಎಲ್ಲರೂ ಬಲ್ಲ ಮಾತು.]

# ತಿರುಗುಪ್ಪು

[ಪ್ರವೇಶಿಕೆ:— ೧೯೪೨ರ ಆಗಸ್ಟದ ರಾಷ್ಟ್ರೀಯ ಚಳುವಳಿಯ ಬೇಗೆ ದೇಶದಲ್ಲೆಲ್ಲ ಹಬ್ಬಿ ಮೂರು ತಿಂಗಳಾಗಿದೆ. ಕರ್ನಾಟಕದ ಮೂಲೆ ಮೂಲೆಗಳಲ್ಲೂ ಅದರ ಉರಿನಾಲಿಗೆ ಚಾಚಿ ಜನರನ್ನು ಎಚ್ಚರಿಸಿದೆ. ಬೆಳಗಾವಿ ಜಿಲ್ಲೆಯ ನಡಂಗಳದ ನಾಡಾದ ಪಾಚ್ಛಾಪುರ, ಯಾದವಾಡ, ರಾಮದುರ್ಗ, ಬೈಲಹೊಂಗಲಗಳ ನಡುವಿನ ಪ್ರದೇಶ ಕಳೆದ ಒಂದೂವರೆ ತಿಂಗಳಿಂದ ಸ್ವತಂತ್ರನಾಡೇನೋ ಎಂಬಂತೆ ನಡೆಯುತ್ತಿದೆ. ಈ ಅವಧಿಯಲ್ಲಿ ಸುತ್ತು ಐವತ್ತು ಮೈಲಿನಳತೆಯಲ್ಲಿ ಒಬ್ಬಾನೊಬ್ಬ ಸರಕಾರೀ ಅಧಿಕಾರಿಯಾಗಲೀ ಪೋಲಿಸು-ಪಿಳ್ಳೆಯಾಗಲೀ ಒಡಹಾಯುವದು ಶಕ್ಯವೇ ಇರಲಿಲ್ಲ; ಹಾಗಿತ್ತು ಜನತೆಯ ಅಜ್ಜಾಗಾವಲು! ಸರಕಾರದ ಪಕ್ಕಗಳನ್ನೇ ಕತ್ತರಿಸಿ ಅದರ ಜನಘಾತುಕವಾದ ಹಾರಾಟವನ್ನು ತಗ್ಗಿಸುವದಕ್ಕೆ ಜನ ಟೊಂಕಕಟ್ಟಿಯೇ ಇತ್ತು; ಸಾವು-ಸೋಲುಗಳನ್ನು ಕೆಣಕಿ ಎಬ್ಬಿಸಿತ್ತು. ಆ ಚಟುವಟಿಕೆಗಳ ಒಕ್ಕಟ್ಟಿನಲ್ಲಿ ಜನರು ಜಾತಿ-ಜಾತಿಯ, ಪಂಗಡ-ಪಂಗಡಗಳ, ಮೇಲು-ಕೀಳಿನ ಒಡಕಿಗೆ ಎಡೆಗೊಟ್ಟಿರಲಿಲ್ಲ. ಪೋಲೀಸರ ಗುಂಡಿಗೆದೆಗೊಟ್ಟ ಜಂಗಿನ ಸ್ವಾಮಿಗಳಿಗೆ ಕೊನೆಗಾಲದಲ್ಲಿ ಅನ್ನ-ನೀರು ನೀಡಿದವರು ಮುಸಲರು; ಮಣ್ಣು ಕೊಟ್ಟವರು ಬ್ರಾಹ್ಮಣರು. ಲಾಠೀ ಪೆಟ್ಟಿಗೆ ಬಲಿಬಿದ್ದ ಹೂಲಿ-ಆಚಾರ್ಯರ ಸಿದಿಗೆ ಹೊತ್ತವರು ಮೋಚಿಗರು. ಆದರೂ ಅವರಿಬ್ಬರ ನೆನಹು ಎಲ್ಲ ಜಾತಿಯವರಿಗೂ ಪವಿತ್ರವಾಗಿತ್ತು; ಸ್ಫೂರ್ತಿಯ ಸೆಲೆಯಾಗಿತ್ತು! ಹೀಗಿತ್ತು ಆ ಕಾಲದ ಜನತೆಯ ಜಾಗ್ರತಿಯ ಪರಿ!!

ಅಕ್ಟೋಬರ ತಿಂಗಳಿನ ಕೊನೆಯ ವಾರ. ಬೆಳಗಾವಿ ಬಾಗಲಕೋಟೆಗಳ ಹೆದ್ದಾರಿಯು ಗೋಕಾವಿ-ಧಾರವಾಡಗಳ ರಸ್ತೆಯನ್ನು ದಾಟುವ ಕತ್ತರಿ-ಕೂಟಿನ ಬದಿಯಲ್ಲೇ **ಯರಗಟ್ಟಿಯ** ಹಳ್ಳಿ; ಸುಮಾರು ಮೂರುಸಾವಿರ ಜನವಸ್ತಿಯ ಈ ಹಳ್ಳಿಯಲ್ಲಿ ನಾಡ-ನೆತ್ತರದ ನರಗಳು ಇಷ್ಟು ಒತ್ತರದಿಂದ ಹಾರುತ್ತಿರಬಹುದೆಂದು ಯಾರಿಗೂ ಕಾಣಿಸುತಿರಲಿಲ್ಲ. ಅಲ್ಲಿಯ ಎಲ್ಲ ಚಟುವಟಿಕೆಗಳಿಗೂ ಕೇಂದ್ರವಾದದ್ದು ಆ ಕತ್ತರಿ-ಕೂಟಿನ ಬಸ್ಸ್-ನಿಲ್ದಾಣಕ್ಕೆ ಹೊಂದಿದ್ದ, ತಳವಾರ ಮುದುಕಿಯೊಬ್ಬಳು ನಡೆಯಿಸುತ್ತಿದ್ದ ಒಂದು ಚಹಾದ ಅಂಗಡಿಯು ಮುರುಕು ಗುಡಿಸಲು! ಬಸ್ಸಿನ ಪ್ರವಾಸಿಕರು ಹಲವರಂತೆ, ಪೋಲೀಸ ಅಧಿಕಾರಿಗಳು ಸಹ ಆ ಚಹಾದಂಗಡಿಯ ಅತಿಥಿಗಳಾದುದುಂಟು. ಆದರೆ ಅವರ ನೆರಳ ಹಿಂದೆಯೇ ರೇಲು-ಗಾಡಿಗಳನ್ನುರುಳಿಸುವ, ಚಾವಡಿ-ಕಚೇರಿಗಳನ್ನು ಸುಟ್ಟು ಬೂದಿ ಮಾಡುವ ಹಂಚಿಕೆಗಳು ಹವಣುಗೊಳ್ಳುತ್ತಿದ್ದವೆಂಬವನ್ನು, ಪಾಪ, ಆ ಪೋಲೀಸು-ಪ್ರಾಣಿಗಳೂ ಅರಿಯವು! ಆ ಪೋಲೀಸುಗಳ ಹುಚ್ಚುತನಕ್ಕೆ ಆ ತಳವಾರ ಮುದುಕಿ ಬಿದ್ದು ಬಿದ್ದು ನಕ್ಕದ್ದುಂಟು; ಮುಮ್ಮಲ ಮರುಗಿದ್ದೂ ಉಂಟು.

ಒಂದುದಿನ ಇಳಿಹೊತ್ತಿನ ಸಮಯ; ಗುಡಿಸಲಿನ ಪಡಸಾಲೆಯ ನಡುಬಾಗಿಲ ಮುಂದಿನ ಚಪ್ಪರದಲ್ಲಿ ಮುದುಕಿ ನರಸಮ್ಮ, ಎಲೆಯಡಿಕೆಯ ಚಂಚಿ ಬಿಚ್ಚಿಕೊಂಡು ಕುಳಿತಿದ್ದಾಳೆ. [illegible]ದಲ್ಲಿ ಮಂಗ-ಚೇಷ್ಟೆಯ ಕಳೆದಿದ್ದರೂ ಎದೆಯಲ್ಲಿ ಡವಡವಿಕೆ ಇದ್ದ ಚಿನ್ಹಗಳೂ ಆಗಾಗ ಕಾಣುತ್ತಿವೆ. ನಡುನಡುವೆ ಅವಳು ಗುಡಿಸಲೊಳಕ್ಕೂ ಅದರಾಚೆ ಬಣವೆಯ ಕಡೆಗೂ, ಒಮ್ಮೊಮ್ಮೆ ಬೀದಿಗಳ ಎಡಬಲಕ್ಕೂ ಆತುರತೆಯಿಂದಲೂ ಚಾಣಾಕ್ಷತನದಿಂದಲೂ ನೋಡುತ್ತಾಳೆ. ಅಷ್ಟರಲ್ಲಿ ಆಕಡೆಯಿಂದ ತಲೆಯಮೇಲೆ ನೀರಿನ ಕೊಡ ಹೊತ್ತುಕೊಂಡು ಅವಳ ಸೊಸೆ ಬರುತ್ತಾಳೆ. ಅವಳು ಬಾಗಿಲ ಒಳಕ್ಕೆ ಹೋಗುವವಳು ಹಾಗೇ ತಡೆದು ನಿಂತು, ರಸ್ತೆಯಾಚೆಗೆ ಕಣ್ತಿರುಗಿಸಿ ನೋಡುತ್ತಾಳೆ.]

**ಸೊಸೆ**— ಅತ್ತೆಮ್ಮಾ, ಯಾಕೋ ಇವತ್ತು ಮಧ್ಯಾನ್ನದ ಬಾಗಲ್ಕೋಟೀ ಬಸ್ಸು ಇನ್ನೂ ಬರಲಿಲ್ಲಬೇ! 'ಚಾ'ಕs ಎಸರಿಟ್ಟು ಎಷ್ಟೋತ್ತಾತೂ?

**ಅತ್ತೆ**— ಮೊದಲs ನೋಡೂ, ಈ ಬಸ್ಸಿಗೇನೂ ಹೊತ್ತಿಲ್ಲಾ, ವ್ಯಾಳ್ಯಾಯಿಲ್ಲಾ; ಈಗಂತೂ ಮೂರು ತಿಂಗಳಾತು, ಅಲ್ಲಿ ರೇಲಗಾಡೀ ಬಿತ್ತು, ಇಲ್ಲಿ ಪೂಲು ಮುರೀತು, ಮತ್ತಲ್ಲಿ ಸ್ಟೇಶನ್ನ ಸುಟ್ಟಿತು ಅಂತ ದೇಶದ ತುಂಬೆಲ್ಲಾ ಎದ್ದೈತಿ ದಗದಗಿ! ಇದೇನಂದೀ, ಬೇಲಿ ಎದ್ದು ಹೊಲಾ ಮೇಧಾಂಗ ತಂಗೀ! ಊರ ಜನರ ನಂಬಿಕೀ ಕಳಕೊಂಡ ಮ್ಯಾಗ ಯಾ ಸರಕಾರಾ ಎಷ್ಟು ದಿನ ನಿಂತೀತೂ? ಕೇಳ್ಳಿಲ್ಲಾ; ಮೊನ್ನೆ ಹುಬ್ಬಳ್ಳಿ ಗದುಗಿನ್ನಡಕ* ಒಂದs ರಾತ್ರಿ ಮೂರು ಸ್ಟೇಶನ್ನ ಸುಟ್ಟ್ಯಾರಂತs; ಮತ್ತ ಖಾನಾಪೂರದಾಚೇಕ ಮೂರು ಮೈಲು ಗಾಡೀ ಹಳೀನ ಕಿತ್ತಿ ಒಗೆದಾರಂತ. ಇರಲಿ ಅದೆಲ್ಲಾ ನಮಗ್ಯಾಕ? ಗಡಾಗಡಾ ಇನ್ನೊಂದೆರಡು ಕೊಡಾ ನೀರು ತತಾ! ನಿನ್ನಂಥಾ ಗಟ್ಟಿಮುಟ್ಟ ಸೊಸಿ ಇದ್ದಲ್ಲೆ ಈ ಯರಗಟ್ಟೀ ಕೂಟಿನ್ಯಾಗ ನನ್ನ ಚಹಾದ ಅಂಗಡಿ ನಡದೈತಿ. ಗಸಕ್ಕನೇ ಬಸ್ಸು ಬಂದಗಿಂದೀತು; ಆದರಾಗ ಬ್ಯಾರೆ ಬೆಳಗಾಂವಿ ಬಸ್ಸು ಬರೋಹೊತ್ತಾಗೈತಿ. ಎರಡೂ ಬಸ್ಸು ಒಂದs ಏಟಿಗೇ ಬಂದರ ಪ್ಯಾಸೆಂಜರ ಜನರೂ ಚಾದ ಬದಲೀ ನಮ್ಮನ್ನೇ ಅರಕೊಂಡು ಕುಡದಾರು!

* ನಡುವೆ

(ಸೊಸೆ ಒಳಕ್ಕೆ ಹೋಗಿ, ನೀರು ಸುರುವಿ ಕೈಯಲ್ಲಿ ಬರಿಗೊಡವನ್ನು ಹಿಡಿದು ಕೊಂಡೇ ಬರುವಳು; ಅಷ್ಟರಲ್ಲಿ ಮುದುಕಿ ಮತ್ತೊಮ್ಮೆ ಅತ್ತಿತ್ತ ಸಾಂಕೇತಿಕ ದೃಷ್ಟಿಯಿಂದ ನೋಡಿ, ಸೊಸೆ ಹಿಂದಿರುಗಿ ಬಾಗಲಿಗೆ ಬರುವಷ್ಟರಲ್ಲಿ, ಬಾಯಲ್ಲಿ ಎಲೆ–ಅಡಿಕೆ ತುರುಕಿಕೊಳ್ಳುತ್ತಿರುವಳು. ಈಸಲ ಅವಳ ಮುಖದಲ್ಲಿ ಸಾಕಷ್ಟು ಸಮಾಧಾನ ಚಿನ್ನಗಳು ತೋರುತ್ತಿವೆ.)

**ಸೊಸೆ**— ಅತ್ತೆವ್ವಾ, ಒಲೀಮ್ಯಾಗ ಎಣ್ಣೀ ಕಡಾಯಿ ಹಾಗೇ ಐತೆಲ್ಲಾ ಇನ್ನೂ? ಕರಿಯೂದು ಎಲ್ಲಾ ಆಗಿಲ್ಲಾ?

**ಅತ್ತೆ**— ಕರದವಲಕ್ಕಿ ಮತ್ತು ಕಾರದಾಣಿ ಮಾಡಿಟ್ಟೀನಿ; ಇನ್ನು ಬಜೀ ಅಷ್ಟ ಕರಿಯೂದೈತಿ.

**ಸೊಸೆ**— ಅದ್ಯಾಕ, ಮದ್ಯಾಣದಾಗs ಕರೀತಿದ್ದಿಲ್ಲಾ?

**ಅತ್ತೆ**— ಹೌದು; ಆದ್ರ ಇವತ್ತು, ಬೆಳಗಾಮಿಯಿಂದ ಮಿಲಿಟರಿ ಜನರದೊಂದು ಸ್ಪೆಶಲ್ ಬಸ್ಸು ಬಂದುಹೋತು ಯಾಡವಾಡಕ್ಕ; ಗೊತ್ತಿನ ಜಾಗಾಂತ, ಇಲ್ಲಿ ಬಸ್ಸ ನಿಂದ್ರಿಸಿದ್ದರು. ಅವಕ್ಕೆಲ್ಲಾ ಬಜೀ ಈಡು ಮಾಡುವದೇ ಸಾಕು ಸಾಕಾಯಿತು, ತಾಯೀ!

**ಸೊಸೆ**— ಹಾಗಾದ್ರ, ನಾ ಬಜೀ ಕರೀಲಾಕ ಕುಂಡರಲ್ಯೇನು ಅತ್ತೆವ್ವಾ? ಈಗಿನ ಪೂರ್ತೆ ನೀರು ಸಾಕಾದಂತಾಗ್ಯಾವು! ಹೊತ್ತು ಮುಣುಗೂದರಾಗs ಮತ್ತೆರಡು ಕೊಡಾ ನೀರು ತಂದರ ಬಂದೀತಂತ! (ಕೈಲಿದ್ದ ಕೊಡವನ್ನು ಒಳಗಿಡಲು ಹೋಗುವಳು.)

**ಅತ್ತೆ**— ಏನ್ಬ್ಯಾಡ್ ಬಿಡು ಮಗಳs! ಮುನ್ಯಾಗ ಉಳ್ಳೀಗಡ್ಡಿ ಎಷ್ಟದಾವು ನೋಡುs; ಆ ಬುಟ್ಟೀ ತತಾ ಇಲ್ಲೀ; ಕುಂತಲ್ಲೀ ಹೆಚ್ಚಿರ ಹೆಚ್ಚತೀನಿ.

**ಸೊಸೆ**— ಇದರಾಗ ಒಂದ ನಾಕ ಆದಾವಲ್ಲಬೇ ಉಳ್ಳಾಗಡ್ಡೀ!

**ಅತ್ತೆ**— ಇರಲಿ ತಾ; ಅವಷ್ಟು ಉಳ್ಳಾಗಡ್ಡೀ ಮತ್ತ ಕುಡಗೋಲು. (ಸೊಸೆ ತಂದುಕೊಡಲು) ಮಗಳ, ನೀ ಅಷ್ಟು ಯರಗಟ್ಟೀ ಊರಾಗ ಹೋಗಿ ಇನ್ನಷ್ಟು ಉಳ್ಳಾಗಡ್ಡೀ ಒಣಾ ಮೆಣಸಿನಕಾಯೀ ತತಾ; ಇಷ್ಟ್ಯಾತಕ್ಕ ಸಾಕಾದಾವು!....ಕುರಬಗಟ್ಟಿ ಯಲ್ಲಪ್ಪಾ ನಿನ್ನೆ ಸತ್ತೀಗೇರಿಯಿಂದ ಬರೋವಾಗ, ಅಷ್ಟು ಬದ್ನೀಕಾಯೀ ಮತ್ತ ಅವರೀ ಕಾಯೀ ತಂದಾನ; (ಉಳ್ಳೀಗಡ್ಡಿ ಹೆಚ್ಚುತ್ತ) ಮತ್ತ ನಿನ್ನ ದಸೆಯಿಂದ

ಬೆಳಸೀನೂ ತಂದಾನ; ಸೀ ಬಸರು ಹಂಗಸು ಅಂತಾ ನಾ ಮುದ್ದಾಂ ಹೇಳಿದ್ದೆ.....ಅಲ್ಲs ಅಟು ಕಂದೀಲ ಹಚ್ಚಿಕೊಡು. ಮಕ್ಕತ್ತಲ್ಯಾಗ ಕಾಣವಲ್ಲದೂ.

**ಸೊಸೆ**— ಬೆಳಸೀ !— ಬೆಳಸಿ ಅಂದರೇನಬೇ ! (ಕಂದೀಲು ತಂದು ಹಚ್ಚ ತೊಡಗುವಳು.)

**ಅತ್ತೆ**— ಬೆಳಸೀ ಅಂನರ ಗೊತ್ತಿಲ್ಲಾ? ಸೀತೆನೀ; ನಮ್ಮಕಡೆ ನಾವು ಬೆಳಸೀ ಅಂತೇವಿ ಆದಕ್ಕ; ಊರಾಗ ಹೋಗೋದರಾಗs ಬೇಕಾದರ ಸುಟಕೊಂಡು ತಿಂದು ಹೋಕ್ಕಿಯೇನೂ? ಇಲ್ಲದಿದ್ರ ಬಂದ್ಮ್ಯಾಗ ತಿನ್ನು; ತಡಾ ಆದೀತು.

**ಸೊಸೆ**— ಅಲ್ಲಬೇ ಅತ್ತೆವ್ವಾ, (ತನ್ನ ಕೆಲಸದಲ್ಲಿ ತಡೆದು) ಸೀತೆನಿ ಅಂದೆಲ್ಲಾ; ನೆಪ್ಪಾಯಿತು ನೋಡು. ನಿನ್ನೆ ನಾ ಊರಾಗ ಹೋದಾಗ ರುದ್ರಾಪೂರ ದೇಸಾಯರ ಕುದರೀಗಾಡಿ ಬಂದಿತ್ತು ಮುರಗೋಡದಿಂದ; ಆಗ ಜನರೆಲ್ಲಾ ಮಾತಾಡಿದ್ರು ಈಸಾರೆ ಸರಕಾರದವರು ಬೆಳಿ ಯೆಲ್ಲಾ ಹೊಲದಾಗಿಂದ ಹೊಲದಾಗs ತಾವೇ ಕೊಯ್ಸಿಕೊಂಡು ಹೋಕ್ಕಾರಂತ. ಇದೇನ ಬಂತಬೇ ನಮ್ಮ ದೇಶದಮ್ಯಾಗ ಹೊಸಾ ಪಿಡುಗೂ ಅಂತೀನಿ. (ಕಂದೀಲು ಒರೆಸಹೋಗಿ, ಅದರಲ್ಲಿ ಎಣ್ಣೆ ಇಲ್ಲೆಂದು ತಿಳಿದು, ಬಾಟ್ಲಿ ತಂದು ಎಣ್ಣೆ ಹಾಕುವಳು.)

**ಅತ್ತೆ**— ಅಲ್ಲಾ, ಸೂಳೀ ಪಾಪ ಸನ್ಯಾಸಿಗೆ ಅಂತಾರಲ್ಲಾ ಹಾಗೈತಿ ಈಗಿನ ದಿವಸಕಾಲಾ! ಈ ಇಂಗ್ರೇಜರು ಆ ಜರ್ಮನೇರು ಅಲ್ಲಿ ಆರುಸಾವಿರ ಮೈಲಿನಮ್ಯಾಗ ಯುದ್ಧಾ ಆಡಿದ್ರ, ಇಲ್ಲೀ ರೈತರದೂ ಕೂಲೀಕುಂಬಳಿಯುವರದೂ ಬಂದೈತಿ ಗೋಳು! ದೊಡ್ಡ ದೊಡ್ಡ ಊರಾಗೆಲ್ಲಾ ಅದೇನೋ ರೇಶನ್ ಅಂತ ಮಾಡ್ಯಾರಂತ! ಹೇಳ್ತಿದ್ದಿಲ್ಲಾ, ಪಾಚ್ಛಾಪುರದ ಫಕೀರಸಾಬಾ! ಅದಕ್ಕs ನಮ್ಮ ಜನರ ಹೊಲಾಮನೀಮ್ಯಾಗ ಸರಕಾರದ ಕಣ್ಣು.

**ಸೊಸೆ**— ಆತುಬಿಡು; (ಬಟ್ಟೆಯಿಂದ ಕಂದೀಲು ಒರೆಸುತ್ತ) ಹೀಂಗಾದರ ಜನಕ್ಕ ಸರಕಾರಕ್ಕ ವರ್ಮಾ ಬೀಳದಬಿಟ್ಟೀತು? ಅಲ್ಲಾ ನಮ್ಮ ಹೊಲಾ, ನಮ್ಮ ಕಾಳು, ನಮ್ಮ ದುಡಿತಾ, ನಮ್ಮ ಬೆವರೂ, ನಮ್ಮ ನೆತ್ತರಾ,

ಇಷ್ಟೆಲ್ಲ ನಮ್ಮದು ನಾವು ಸಂಣಮಾಡಿ ಬೆಳಸಿದ ಬೆಳೀನ ಆಯತಾ ಹೊತ್ತಿಗೆ ಸರಕಾರ ಕೊಯ್ಕೊಂಡ ಹೋಗೋದಂದ್ರ! ಜನಾ ಆದರೂ ಯಾಕ ಕೇಳೀತಬೇ! ಈಗ ಮೂರು ತಿಂಗಳಾತು,—ಮಹಾತ್ಮ ಗಾಂಧೀಯವರ್ನ ಮತ್ತು ನಮ್ಮ ದೇಶದ ದೊಡ್ಡ ದೊಡ್ಡ ಜನರ್ನೆಲ್ಲಾ ಹಿಡಿದು ತುರಂಗಕ್ಕ ಹಾಕಿದರಂತಲ್ಲಾ!—ಅವತ್ನಿಂದ ದೇಶಂತ ದೇಶೆಲ್ಲಾ, ಜನರು ರೊಚ್ಚಿಗೆದ್ದು ಕುಂತಾರಂತ! ಈಗ ಹೊಲದ ಬೆಳಿಗೆ ಕೈ ಹಚ್ಚಿದರ ಜನರ ಕಿಚ್ಚು ಹೆಚ್ಚಾಗಾಕಿಲ್ಲ ಮತ್ತ? (ದೀಪ ಹಚ್ಚಿಡುವಳು.)

**ಅತ್ತೆ**— ಹೌದ್ನೋಡು ತಂಗೀ, ಹೊಲದ ಬೆಳೀ, ಮನೀ ಹೆಂಡ್ತೀ, ಲಕ್ಷ್ಮೀದೇವಿ ಸಮಾನಾ! ಅದಕ್ಕ ಕಣ್ಣಿಟ್ಟವರು ಹೊಂತೂಟಲೇ ಹೋದಾರು ಬಿಡು!

**ಸೊಸೆ**— ಅದ್ಯಾಕs? ಕಣ್ಣೀಲೆ ನೋಡತೇವಲ್ಲಾ! ಈಗ ಒಂದ ತಿಂಗಳಾತು ಸರಕಾರದ ಒಂದು ಪಿಳ್ಳಿಯಾದರೂ ಹಾದ್ಯೈತೇ ಮತ್ತ ಐವತ್ತ ವೈಲಿನಾಗ? ನಮ್ಮ ಅಯ್ಯನೋರ್ರೂ ಹೂಲಿ ಆಚಾರ ಸ್ವಾಮೋರು ಸತ್ತಾಗಿನಿಂದಂತೂ ಜನಕ್ಕೆ ಪಿತ್ತ ನೆತ್ತಿಗೇರೈತಿ. ಮುನವಳ್ಳಿ, ಯಕ್ಕುಂಡಿ, ನ್ಯಾಸರಿಗಿ, ಮಮದಾಪೂರದ ಜನರಂತೀ ಬಂದವರ್ನ ಕಡದ ಹೋಳುಮಾಡಿ ಹೆಡಗೀ* ತುಂಬ್ತಿವೀ ಅಂತ ಕುಂತಾರಂತ!

**ಅತ್ತೆ**— ಇದೆಲ್ಲಾ ನಿನಗ ಹ್ಯಾಗೆ ಗೊತ್ತಾತೂ ಅಂತೇನು.

**ಸೊಸೆ**— ಅದ್ಯಾಕಬೇ! ನೀ ಮುದುಕೀ, ಮನ್ಯಾಗ ಕುಂತಿರತಿ; ಗೊತ್ತಿರಾಕಿಲ್ಲ ಬಿಡು! ಈಗೇನು, ಸಣ್ಣ ಸಣ್ಣ ಹುಡುಗರು ಸಹಿತ ಮುಂಜಾಲಿಂದ ಸಂಜೀತನಕ ಇದs ಮಾತs! ಮೊನ್ನೆ ಯರಝರವಿಯೊಳಗ ಏಳು ವರ್ಷದ ಒಂದ ಹುಡುಗಾ ತಾನs ಎದುರಿಗೆ ಹೋಗಿ ಮಿಲಿಟರೀಯವರ ಗುಂಡಿನಿಂದ ಸಾಯಲಿಲ್ಲಾ; ಆಗಿನಿಂದ ನೋಡು ಜನರಿಗೆ ಸಾವಿನ ಅಂಜಿಕೀನೇ ಹೋಗೈತಿ. ತೊರಗಲ್ಲು, ಕಡಕೋಳ, ಲೋಕಾಪೂರ ಬನ್ನೂರ ಜನರಂತೂ

---

* ಬುಟ್ಟಿ

ಸಂಸ್ಥಾನದವರು! ಅವರಿಗೀಗ ಪೂರಾ ಸ್ವರಾಜ್ಯನೇ ಸಿಕ್ಕೈತಿ ಅಂತ! (ಬಾಟ್ಲಿಯನ್ನು ಒಳಗಿಡಲೆಂದು ಏಳುವಳು.)

**ಅತ್ತಿ**— ಅವ್ರ ಬೆಳಗಾಂವಿಗೆ ಮತ್ತ ಹತ್ತುಸಾವಿರ ಮಿಲಿಟರಿ ತಂದಾರಂತಲ್ಲs !

**ಸೊಸೆ**— ತರ್ಲಿ ಬಿಡು; ಜನರೇನು ಅದಕ್ಕೆಲ್ಲಾ ಜಪ್ಪು ಹಾಕೋಹಾಗಿಲ್ಲ. ಹೋದವಾರ ಹನ್ನೆರಡ ವಿಮಾನಾ, ನಮ್ಮ ತಲೀಮ್ಯಾಲೀ, ಆಗದೀ ನೆಲಬುರಕೀ ಹಾದುಹೋದವಲ್ಲಾ; ಆಗ ನಾ ಆಲದಕಟ್ಟೆಗೆ ಹೋದಾಕಿ, ತಿರುಗಿ ಬರತಿದ್ದೆ. ಆಗೇನಂದೀ ಜನರೆಲ್ಲಾ ಹೆದರಿಕೀ ಬೆಚ್ಚಿಕೀ ಬಿಟ್ಟು ಹೂಲೀ ಎಬ್ಬಿಸಿ ನೆರೆದರು ನೋಡು. ಮುನವಳ್ಳಿ ಲೈನುದಾರಿ ಸಾಲದ ಹೊಲದಾಗಿನ ಹೆಣ್ಣೂ ಗಂಡೂ ಎಲ್ಲಾ, ಜಾತ್ರಿ, ಜಾತ್ರಿ ನೆರಧಂಗ ನೆರದರು ನೋಡು! (ಬಾಟ್ಲಿ ಇಟ್ಟು, ನೆಲ ಒರೆಸುವಳು.)

**ಅತ್ತಿ**— ಅದೇನs ಆಗಲಿ ಮಗಳs, ಬೇಕಾದವರು ಬೇಕಾದ್ದು ಮಾಡಲಿ; ನೀ ಮಾತ್ರ ಜೀವಾ ಹಿಡಕೊಂಡು ಇರು ಏನವಾ! ಇಲ್ಲದ್ದs ಮಾಡಬ್ಯಾಡಾ !

**ಸೊಸೆ**— ನನಗೇನು ತಿಳಿಯುವದಿಲ್ಲೇನು ಅತ್ತೆವ್ವಾ! ಅವತ್ತ ವಿಮಾನ ಆಗದೀ ನೆಲಬುರಕೀ ಬಂದುವಲ್ಲಾ; ಆಗ ನಾ ಒಂದ ಆಲದ ಮರದ ಹೊದರಿನ್ಯಾಗ ಹೊಕ್ಕೊಂಡು, ಏನಾಗ್ತೈತೋ ಅಂತ ಕೈಯಾಗ ಜೀವಾ ಹಿಡಕೊಂಡು ಕುಂತಿದ್ದೆ ನೋಡಬೇ ! ಆದರ ನನಗ ನನ್ಕಿಂತ ಇವರದs ಹೆಚ್ಚು ಚಿಂತಿ ಆಗೈತಿ. ಈಗ ಹದಿನೈದು ದಿನಾ ಆತು, ಇವರೂ ಮುಕಾ ಸೈತ ತೋರಿಸಿಲ್ಲಾ. ಹೋದ ಶನಿವಾರ ರಾತ್ರಿ ಬಂದಿದ್ದರಂತ; ಆದರ ನೀ ಹೇಳ್ತೀ ಬಂದೇಯಿಲ್ಲಾ ಅಂತ. ನನಗನಿಸತೈತಿ ಇವರೂ ಈ ಚಳವಳ್ಯಾಗ ಕೂಡ್ಯಾರಂತ! ಇನ್ನ ಇವರೂ ತುರಂಗಕ್ಕ ಹೋಗಿ ಕುಂತರ–ಅಥವಾ ಗುಂಡು ಗಿಂಡು ಬಡಿದು ಏನಾದರೂ ಆದರs, ನಾ ಏನು ಮಾಡಲಿ ಅಂತೈತಿ ನನ್ನ ಜೀವಾ. ಇವರು ಹೀಂಗ ಮನೀ ಬಿಟ್ಟು ತಿರುಗಲಾಕಹತ್ತಿ ಈ ಸಾರೆ ದೀಪಾವಳಿ ಹಬ್ಬಾನೇ ಆಗಲಿಲ್ಲ ನೋಡು ನಮ್ಮನ್ಯಾಗ! (ಮತ್ತೊಮ್ಮೆ ಒಳಹೋಗಿ ಬರುವಳು.)

**ಅತ್ತೆ**— ಅದನ್ಯಾಕ ಅಷ್ಟ ಹಚಗೊಂತೀ ಬಿಡು; ಈ ಸಾರೆ ಇಡೀ ಹಿಂದುಸ್ಥಾನದಾಗs ಯಾರೂ ಮಾಡಿಲ್ಲಂತ ದೀಪಾವಳಿ! ಅವ ರೇನು ನಮ್ಮ ಮಲ್ಲಪ್ಪಗ ಇಪ್ಪತ್ತೆಂಟು ಕೆಲಸಾ. ಒಂದ ವರಸ ತ್ರೊಟ್ಟಾ, ಒಂದು ಜೋಡಿ ಹೋರೀ ತೊಗೋಳ್ಳೋಣಂತ ಲೆಕ್ಕಾ ಹಾಕತಿದ್ದ. ಆದರ ನಾವೇನು ದುಡ್ಡಿದ್ದವರs? ಯಾರದೋ ಹೊಲಾ, ಯಾರವ್ರೋ ಎತ್ತೂ ತಂದು ನಾಕು ಮಂದಿಗೆ ಯಪ್ಪಾ, ಯಂಣಾ ಅಂದಕೋತ ಕಾಲಾಕಳೀತೇವಿ! ಈಗೇನೋ ಅಲ್ಲಿ ಮುಪಕವಿಯೊಳಗ ಎರಡು ಹೋರಿ ಅಗ್ಗದಾಗ ಸಿಗತಾವ ಅಂತ ಯಾರೋ ಹೇಳಿದರಂತ; ಅದಕ್ಕ ಹೋಗ್ಯಾನ. ಅಲ್ಲೀ ಕೆಲಸಾ ಆಗದಿದ್ದರ ಬದಾಮೀತನಕ ಹೋಗಿ ಬರತೀನಿ ಅಂತಿದ್ದಾ. ನಮ್ಮ ಮಲ್ಲಪ್ಪೇನು? ಮುಂಡಗೀ ಅಂತ ಮನಸ್ಯಾ. ಬದಾಮಿಗೆ ಹೋಗಿ ದ್ರರೂ ಒಂದೆರಡು ದಿನದಾಗs ಬಂದs ಬರತಾನ. ತಿರುಗಿ ಬರು ವಾಗ ನಿನ್ನದಸಿಂದ ನಿಮ್ಮ ಕೆರೂರಿಗೂ ಹೋಗಿ ಒಂದರೂ ಬಂದಾನು, ನಿನ್ನ ಎಂದ ಕರಕೊಂಡು ಹೊಗತಾರಂತ ಕೇಳ ಲುಕ. ಆದರ ನೋಡ್ಮಗಳ, ಯಾರ ಮುಂದೂ ಅವಾ ಇಲ್ಲಿ ಹೋಗ್ಯಾನ ಅಲ್ಲಿ ಹೋಗ್ಯಾನಂತ ತುಟಿ ಎರಡ ಮಾಡಬ್ಯಾಡ ಹಾಂ! ಪಾಪ ಮಲ್ಲಣ್ಣ ಇಷ್ಟು ಮೇನತ್ತು ಮಾಡಿದ್ದಕ್ಕ ಶಿವಾ ತಕ್ಕ ಫಲಾ ಕೊಟ್ಟರ, ನಿನಗ ನೋಡ ತಂಗೀ, ಪಂಕೀ ಜೆಳ್ಳೀವು ಮಾಡಿಸಿದ್ರೂ ಸರಗೀ ಮಾತ್ರ ಬಂಗಾರದ್ದು ಮಾಡಿಸಿ ಹಾಕಸ್ತೀನಿ. (ಹೆಚ್ಚುವ ಕೆಲಸ ತೀರಲು) ಇಕಾ, ಈ ಬುಟ್ಟೀ ಅದೂ ಒಳಗಿಡು; ಹಿಡಿ.

**ಸೊಸೆ**— ಅದೆಲ್ಲಾ ಕಂಡಾಗ ಹೌದಲ್ಲೊ....! ಆದರ ಇವರು ಅದರೊಳಗ ಇಲ್ಲಾಂದವ್ಯಾಗ....? (ಅನುಮಾನದಿಂದ ಅತ್ತೆಯೆದುರಿನ ಸಾಮಾನುಗಳ ನ್ನೆಲ್ಲ ಎತ್ತಿ ಒಳಗಿಡುವಳು.)

**ಅತ್ತೆ**— ಹಾಗಲ್ಲಾ! ದಿವಸಕಾಲ ಕಠಿಣಾ; ಯ್ಯಾರು ಹ್ಯಾಂಗ ತಿಳಕೊಂತಾರ ಅನ್ನೋದು ಹೇಳಲಾಕ ಬರೋದುಲ್ಲಾ! ಅಲ್ಲಾ, ಇಲ್ಲಿ ಕೇಳು, ನಿನಗ ಈಗ ಐದು ತಿಂಗಳಾ ತುಂಬಾಕ ಬಂದುವು; ನೀ ಇನ್ನ ನಿಮ್ಮೂರಿಗೆ ಹೋಗೋದs ಚಲೋ! ಇನ್ನೊಂದು ತಿಂಗಳದಾಗ

ಗೌರೀಹುಣ್ಣಿವಿಗೆ ಅಂದ್ರ, ನೀ ತವರಮನ್ಯಾಗs ಇರತೀ ಏಳು! ಆದ್ರ ನೀ ಹೋದರ, ಈ 'ಚಾ'ದ ಅಂಗಡಿ ನಡಿಸೋದs ಬಿಗಿ ಅಂತ ನಾ ಸುಮ್ಮಾಕಿದ್ದೀನಿ ಅಲ್ಲs—ತಂಗೀ.... ಅದೇನೋ ಸಪ್ಪಳಾತಲ್ಲs! ಬಸ್ಸು ಬಂತೇನೋ (ದೂರದಿಂದ ಬಸ್ಸಿನ ಹಾರ್ನಿನ ಸಪ್ಪಳ ವಾಗುವದು)

**ಸೊಸೆ**—ಹೌದಬೇ! ಆದರ ಇದು ಈ ಕಡೆಯಿಂದ ಬಂತೂ! (ಹಣಿಕಿಕ್ಕಿ) ಇದು ಬೆಳಗಾಂವಿ ಬಸ್ಸು ನೋಡಬೇ! ಬಾಗಲಕೋಟಿ ಬಸ್ಸು ಬರಲೇ ಇಲ್ಲಾ; ಹೊತ್ತರs ಮುಣಗಿಹೋತು!

**ಅತ್ತೆ**— ಜೇಶಿ* ಆತು ಬಿಡು. ಬೆಳಗಾಂವಿ ಬಸ್ಸಿನಾಗೇನು ನಮ್ಮ ಗಿರಾಕಿ ಜಾಸ್ತಿ ಇರೂದಿಲ್ಲಾ; ಕರದವಲಕ್ಕೀ ಕಾರದಾಣೇವ್ಯಾಲೆ ಕೆಲಸ ನಡೀತೈತಿ. ನಾನs ಅಷ್ಟ ಚಾ ಮಾಡಿಕೊಡತೀನಿ. ನೀ ಗಡಾನ ಊರಾಗ ಹೋಗಿ ಉಳ್ಳ್ಯಾಗಡ್ಡೀ ಅದೂ ತತಾ; ಹೋಗು ಗಡಾನ! ಮತ್ತ್ಯಾಕ ನಿಂತಿ; ಹೋಗು! ಅಂದರ ಕಣ್ಬೆಳಕು ಇರತs ಬಾಗಲಕೋಟೀ ಬಸ್ಸು ಬರೂದರಾಗs ತಿರುಗಿ ಬಂದೀಯಂತ!

**ಸೊಸೆ**— ಅಷ್ಟ್ಯಾ ಬ್ಯಾಗನೇ ಏನು ಬಂದೇನಬೇ! (ಹಾಗೆನ್ನುತ್ತ ಕಿಡಿಕಿಯಲ್ಲಿ ಬಸ್ಸು ಬರುವ ದಾರಿಯನ್ನೇ ಅವಳು ನೋಡುತ್ತಿರುವಳು; ಅವಳ ಮನಸಿನಲ್ಲಿ ತನಗೆ ಬೇಕಾದವರು ಯಾರಾದರೂ ಬಂದಾರೇ ಎಂದು ಕುತೂಹಲ. ಮುದುಕಿಗೆ, ತನಗೆ ಬೇಕಾದವರು ಆ ಬಸ್ಸಿನಲ್ಲಿ ಬರುವವರಿದ್ದುದರಿಂದ ಸೊಸೆಯನ್ನು ದೂರ ಅಟ್ಟಬೇಕೆಂಬ ಖಟಾಟೋಪ. ಅದಕ್ಕಾಗಿ ಮುದುಕಿ ಸೊಸೆಯನ್ನು ಬಹಳ ಗಡಿಬಿಡಿ ಯಿಂದ ದಾಟಿಸುವಳು. ಬಗಲಲ್ಲಿ ಒಂದು ಬುಟ್ಟಿಯನ್ನು ತೆಗೆದುಕೊಂಡು ಹೋಗ ಹೋಗುತ್ತ ತನ್ನಲ್ಲಿ) ನಮ್ಮ ಮುದಕೀದು ಏನೋ ಖಟಪಿಟಿ ಇರಬೇಕು ಅಂತ ನನ್ನ ಮನಸ್ಸಿನೊಳಗಿನ ಸಂಶಯಾನs ಹೋಗವಲ್ಲದು. (ಎನ್ನುತ್ತ ಸೊಸೆ ಹೋಗುವಳು)

(ಅವಳನ್ನು ಬೇಗಬೇಗನೆ ಹೋಗಲು ಸೊನ್ನೆ ಮಾಡಿ ಮುದುಕಿ ಗುಡಿಸಲ ಒಳಕ್ಕೆ ಹೋಗುವಳು. ಕೂಡಲೆ ಮತ್ತೆ ಬಂದು ಕಂದೀಲನ್ನು ಬೇರೆ ಕಡೆಗೆ ಇಟ್ಟು ಸಂಣದು ಮಾಡುವಳು. ಸೊಸೆ ಹೋದಕಡೆ ನೋಡಿ ಸಮಾಧಾನ ಮಾಡಿಕೊಳ್ಳುವಳು. ಆಮೇಲೆ ಒಂದರೆನಿಮಿಷ ತಡೆದು ಮಾರುಗೈ ಮೇಲೆತ್ತಿ ಗುಡಿಸಲದ ಒಂದು ಮೂಲೆ ಯಾಚೆಯ ನಿಟ್ಟಿನಲ್ಲಿ ಕೈಸನ್ನೆ ಮಾಡುವಳು. ಆ ನಿಟ್ಟಿನಿಂದ ಸಿಳ್ಳಿನ ಸ್ವರಗಳು ಕೇಳಿ

ಬರುವವು. ಕೂಡಲೇ ಒಂದೆರಡು ಗಂಟೆಗಳು ಆ ನಿಟ್ಟಿನಿಂದ ಬಂದು ಅವಳು ನಿಂತಲ್ಲಿ ಬೀಳುವವು. ಅವುಗಳನ್ನವಳು ಒಂದು ನಿಮಿಷದಲ್ಲಿ ಗುಡಿಸಲೊಳಕ್ಕೆ ಅಡಗಿಸುವಳು. ಅಷ್ಟರಲ್ಲಿ ಬಸ್ಸು ತೀರ ಹತ್ತಿರಕ್ಕೆ ಬಂದ ಸಪ್ಪಳಾಗಲು, : ಅವಳು ಬಸ್ಸು ಮಾರ್ಗದ ಕಡೆ ತಿರುಗಿ ಹಿಂಬದಿಯಿಂದಲೇ ಬೇರೇ ಸನ್ನೆ ಮಾಡುವಳು. ಕೂಡಲೇ ಸ್ತಬ್ಧವಾಗುವದು. ಆಮೇಲೆ ಅವಳು ಗುಡಿಸಲ ಒಳಗಿಂದ ಒಂದು ಬಾಕನ್ನು* ತಂದು ಹೊರಗಿರಿಸುವಳು. ಅದರ ಹತ್ತರ ಒಂದು ಮೇಜನ್ನೂ ಇರಿಸಿ ಅದರ ಮೇಲೆ ಚೂಡಾ ಸೇವಿನ ಡಬ್ಬಿಗಳನ್ನು ಹೊಂದಿಸಿಟ್ಟು ಒಳಗೆ ಹೋಗುವಳು. ಅಷ್ಟರಲ್ಲೇ ಬದಿಯಲ್ಲಿ ಬಸ್ಸು ಬಂದು ನಿಂತ ಸದ್ದಾಗುವದು. ಒಬ್ಬಿಬ್ಬರು ಪ್ರವಾಸಿಕರು ಮೋಟಾರು ಡ್ರಾಯ್ವರ್ ಹಾಗು ಇಬ್ಬರು ಪೋಲೀಸರು ಬರುವರು. ಅತ್ತಿತ್ತ ನೋಡಿ ಪ್ರವಾಸಿಕರು ಬಾಕಿನ ಮೇಲೆ ಕುಳಿತುಕೊಳ್ಳುವರು. ಪೋಲೀಸರು ಪಿಳಿಪಿಳಿ ನೋಡುತ್ತ ಸುಳಿದಾಡುತ್ತಿರುವರು; ಮೋಟರ ಡ್ರಾಯ್ವ ರನು ಗುಡಿಸಲ ಬಾಗಿಲವರೆಗೂ ಬಂದು ಮುದುಕಿಯನ್ನು ಕೂಗುವನು.

**ಮೋ. ಡ್ರಾ—** ಎಬೇ ನರಸಮ್ಮ, ನರಸಮ್ಮಾ; ಯಾಕs ಇವತ್ತು ಯಾರೂ ಇಲ್ಲೇನ್ ಪ್ಯಾಶಂಜರ "ಸರಬರಾಯಿ"† ಮಾಡಲಾಕ ?

**ನರಸಮ್ಮ—** (ಒಳಗಿನಿಂದಲೇ) ಬಂದೆ, ತಡಿಯಪ್ಪೋ! (ಹೊರಬಂದು) ಯಾಕೋ ಮಗದುಮ್ಮಸಾಬಾ; ಇವೊತ್ತು ನಿನ್ನ ಪಾಳಿ ಬಂತೇನು ? ಕುಂದರು; ಕುಂದರು; ಚಾ ತರತೇನಿ; (ಪೋಲೀಸರನ್ನು ನೋಡಿ) ಎಲಾ! ಇವರೂ ಬಂದಾರಲ್ಲಾ ಅಂತೀನಿ! ಈಗ ಎರಡು ತಿಂಗಳಾತು, ಪೋಲೀಸರ ಮುಕಾಮs ಇದ್ದಿದ್ದಿಲ್ಲಾ! ಇವೊತ್ತs ಮಧ್ಯಾಣಕ ಮಿಲಿಟರಿಯವರದೊಂದು ಬಸ್ಸು ಬಂದು ಹೋಯಿತು. ಅಂತs ಇವರಿಗೆ ಇಲ್ಲಿ ಬರಾಕ ಧೈರ್ಯ ಆತು ಹೌದs! ಇಬ್ಬರs ಆದಾರೋ ಮತ್ತಿನ್ನೂ ಅದಾರೋ? ಇದ್ದರ ಕರಕೊಂಡು ಬರ್ರಿ ಹೋಗರ್ಲ್ಯೋ; ಹಾಗ್ಯಾಕ ಪಿಳಿಪಿಳಿ ನೋಡ್ತೀರಿ. (ಪೋಲೀಸರಿಬ್ಬರೂ ಏನೂ ತಿಳಿಯದೇ ನೋಡುತ್ತಿರಲು ಮೋಟಾರು ಡ್ರಾಯ್ವರನೇ ಮಾತನಾಡುವನು; ನರಸಮ್ಮ ಗಿರಾಕಿಗಳಿಗೆ ತಿನಸು ಕೊಡುವಳು.)

**ಮೋ. ಡ್ರಾ—** ಅವರಿಗೆ ಕನ್ನಡ ಬರೂದಿಲ್ಲಬೇ ನರಸಮ್ಮಾ! ಅವು ಅತ್ತಲಾಗ ಪುಣೆ ಮುಂಬಯಿಕಡಿಂದ ಬಂದಾವು.

* ಬೆಂಚು † ಏರ್ಪಾಡು

**ನರಸಮ್ಮ—** ಆಯ್ ನನ್ನ ಶಿವನs! ಇವ್ವೊತ್ತು ಮಧ್ಯಾಣದಾಗ ಆ ಮಿಲಿಟರೀವು ಬಂದಿದ್ವಲ್ಲಾ; ಅವೂ ಎಲ್ಲಾ ಆರೇ* ಮಾತಿನವs ಇದ್ದವು ನೋಡು ಒಬ್ಬನ ಹೊರ್ತು! ಅಲ್ಲೊ ಮಗದುಂಸಾಬಾ, ಇಲ್ಲೀ ಪೋಲೀಸರೂ ಜನರೂ ಒಂದಾಗಿ ಸರಕಾರಕ್ಕ ತಿರುಗಿ ನಿಂತಗಿಂತಾರು ಅಂತ ಇವನ್ನ ಹೊರಗಿಂದ ತರಿಸಿಟ್ಟಾರ ಹೌದs! ಆತು ಬಿಡು, ಇತ್ತಲಾಗ ಜನರ ವಿಶ್ವಾಸ ಇಲ್ಲಾ, ಅತ್ತಲಾಗ ಪೋಲೀಸರ ನೆಂಬಿಕಿ ಇಲ್ಲಾ ಅಂದರ ಅಂಥಾ ಸರಕಾರ ಎಷ್ಟು ದಿನಾ ನಡೆದೀತು ಅಂತೀನಿ! ನಾಳೆ ನೋಡು, ದಂಡಿನವರೆಲ್ಲಾ ತಿರುಗಿ ಬಿದ್ದರ (ಆ ಪೋಲೀಸರ ಕಡೆ ತೀಕ್ಷ್ಣವಾಗಿ ನೋಡುತ್ತ) ಈ ಸರಕಾರದ ಗತಿ ಏನು ಅಂತೀನಿ. ಹೊರಗಿಂದ ಬಂದ ಇವಕ್ಕ ಇಲ್ಲಿ ಜನರೆಲ್ಲಾ ಸೇರಿ ಏಳು ದಿನದಾಗ ಏಳು ಕೆರೀ ನೀರು ಕುಡಿಸ್ದ ಬಿಟ್ಟಾರೂ?

**ಮೋ. ಡ್ರಾ—** ಅದೆಲ್ಲಾ ನಮಗ್ಯಾಕ ನರಸಮ್ಮಾ! ನನಗ ಮೋಟಾರು ಹೊಡಿಯೋದು ತಪ್ಪಿದ್ದಲ್ಲಾ; ನಿನಗ ಈ 'ಚಾ'ದ ಅಂಗಡೀ ಗುಡಸಲ ತಪ್ಪಿದ್ದಲ್ಲ.

**ನರಸಮ್ಮ—** ಅದು ಖರೇವು† ಬಿಡು; ಯಾ ರಾಯರ ರಾಜ್ಯ ಆದರೇನು; ರಾಗಿ ಬೀಸೋದು ತಪ್ಪಲಿಲ್ಲ ಅಂತ; ಹಾಂಗೈತಿ ಲೆಕ್ಕಾಚಾರಾ! (ಪೋಲೀಸರಿಗೆ) ನೀವೂ ಅಷ್ಟು ಇಲ್ಲೇ ಕುಂದರ್ರೊ, ಚಾ ತರತೀನಿ.
(ಪೋಲೀಸರು ಕೂಡ ಹೋಗುವರು,.. ಅಷ್ಟರಲ್ಲಿ,)

**ಮೋ. ಡ್ರಾ—** ಅವರಿಗೆ ನಮ್ಮಾತು ತಿಳಿಯಾಣಿಲ್ಲಾ ಅಂತ ಹೇಳಲಿಲ್ಲs ನರಸಮ್ಮ?

**ನರಸಮ್ಮ—** ತಿಳೀದ ಏನ್ಮಾಡ್ಯಾವೋ ಬಿಡೋ; ಈಗ ನೋಡು, ಕುಂಡರು ಅಂದರ ಹ್ಯಾಂಗ ತಿಳಿದವು! ಅಲ್ಲಾ ಬಾಯ್ ಮಾತು ತಿಳೀದಿದ್ದರೂ 'ಬಾಯು'‡ ಮಾತು ತಿಳೀದ ಏನ್ಮಾಡ್ಯಾವು!

**ಮೋ. ಡ್ರಾ—** ನಿನ್ನಂಥಾ ಬಾಯೀ.§ ಇಷ್ಟು ಬಾಯ್ಮಾಡಿ ಹೇಳಿದ ಮ್ಯಾಲೆ ಕಲ್ಲಿಗೂ ಕಿವಿ ಹುಟ್ಯಾವು ಬಿಡು.

---

* ಮರಾಟಿ. † ಖರೇ ಅಥವಾ ಕರೇವು = ನಿಜ. ‡ ತಿಂಡಿ–ತಿನಸಿನ. § ಹೆಂಗಸು.

**ನರಸಮ್ಮ**— ಕಿಲ್ಲಗಳೂ ಹುಟ್ಯಾವು; ಮುಗದುಂಸಾಬಾ! ಆದರೆ ಬೇಕಂತ ಕಲ್ಲಾದ ಈ ಆರೇ ಜನಕ್ಕ ಕನ್ನಡ ಕೇಳೂ ಕಿವಿ ಬರಾಕಿಲ್ಲ ನೋಡು. (ಎಂದು ಒಳಗೆ ಹೋಗಿ ಬಹಾ ತಕ್ಕೊಂಡು ಬಂದು ಪ್ರವಾಸಿಕರಿಗೆ ಕೊಡುವಳು)

**ಮೋ. ಡ್ರಾ.**— ಹೋಗಲಿ ಬಿಡು! ಪಾಪ, ದೂರ ದೇಶದಿಂದ ಬಂದಾವು, ಅವಕ್ಕ ಇನ್ನಟು ಏನಾದರೂ ತಿನ್ನಾಕ ಕೊಡು. ಏನಾದರೂ ಹಂಣುಗಿಂಣು ಆದಾವೇನು?

**ನರಸಮ್ಮ**— ಅಯ್ಯ ನನ ಸಿವನs; ಹಣ್ಣಿಗೇನು ಬ್ಯಾನ್ಯೋ! * ಇವೊತ್ತು ಮುಂಜಾನೆ ಒಳ್ಳೆ ಚಲೋ ಮಾನವಳ್ಳೀ ಬಾಳೀಹಂಣು ತರಿಸೇನಿ; ಕೊಡ್ತೀನಿ ನಿಂದರು. (ಎಂದು ಹಂಣು ತರಲು ಒಳಗೆ ಹೋಗುವಳು)

**ಒಬ್ಬ ಪೋಲೀಸ**— ಕ್ಯಾ ಮುಗದುಂಸಾಬ್; ಹಮುಕೋ ಶಿವ್ಯಾದೇತಾ ಕೀ ಕಾಯ್ ಕಾನಡೀತ್? (ಇಷ್ಟರಲ್ಲಿ ಮುದುಕಿ ಹಣ್ಣು ತರುವಳು)

**ಮುದುಕಿ**— ಆಯ್ಯ ಶಿವ್ಯಾನs! ಸುದ್ದಾಗಿ ಶಿವಶಿವ ಅನಬಾರದs ಇವಕೇನು ಬ್ಯಾನಿ! ಶಿವ್ಯಾ ಅಂತ ಶಿವ್ಯಾ! ಎಂತಾ ಆರೇ ಮಾತಿವು! (ಕುಳಿತವರಿಗೆ ಹಣ್ಣು ಕೊಡುವಳು)

**ಮೋ. ಡ್ರಾ.**— ಹೋಗಲಿ ಬಿಡು, ನರಸಮ್ಮಾ! ಜವಾದಾರಿಗೂ ಆಟ ಹಂಣು ಕೊಡಲಾ.

**ನರಸಮ್ಮ**— ಅವಕ್ಯಾಕ ನಾ ಬ್ಯಾಡೆನ್ನಲೀ; ಪ್ಯಾಶಿಂಜರ್ ಜನರು ಅವ ಸರಾ ಮಾಡಾಕ ಹತ್ತಿದರು; ಹಿಡಿರೋ, ತಿನ್ನಿರಿ! (ಅವರಿಬ್ಬರು ತೆಗೆದುಕೊಂಡು ತಿನ್ನುವರು. ಪ್ಯಾಸೆಂಜರರಿಬ್ಬರೂ ಹಣ ಕೊಟ್ಟು ಹೊರಟು ಹೋಗುವರು.)

**ಒ. ಪೋ.**— (ಮತ್ತೊಬ್ಬನಿಗೆ) ಛಾನ ಆಹೇ ಬುವಾ! ಕಸ್s ಕಾಯ್?†

**ನರಸಮ್ಮ**— (ಸಿಟ್ಟಿನಿಂದ) ಆಂ! ಯಾರಿಗೋ ನೀ ಕಸಕ್‌ಕಾಯಿ ಅನ್ನೋದು ಮಂಗನಂಥವನs! ಮುಸ್ನೋಡಿ ಮಾತಾಡು! ಹಂಣ ಹಂಣ ಮುದುಕಿ, ನಾ ಕಸಕ್‌ಕಾಯೋ! ಖಮ್ಮನ್ನ, ಕಳಿತ ಹಂಣು ಕಸಕ್ಕಾಯೋ! ಇವೆಂಥಾ ಆರೇ ಮಾತs ನಮ್ಮವ್ವಾ! ಹಾಂರಗೆಡದ

---

* ಕೊರತೆ. † ಬಹಳ ಚೆನ್ನಾಗಿದೆ, ಅಲ್ಲವೇ?

ಹೋಗಲೀ!! ನುಣ್ಣಗ ಹಂಣು ತಿಂದು ಮ್ಯಾಲ ಕಸಕ್ಯಾಯಂತ, ಕಸಕ್ಯಾಯಿ! ಉಪಕಾರಗೇಡಿಗಳು ಕಾಣ್ತಾವ ಈ ಆರೇ ಮಂದಿ. ಹೋಗ್ರಿನ್ನ ಮುನ್ಸೋಡಿ. (ಅವರು ರೊಕ್ಕಾ ತೆಗೆಯುತ್ತಿರಲು) ಇರಲಿ ಹೋಗ್ರಿ, ನೀವೆಲ್ಲಾ ಎಂದ ಕೊಟ್ಟದ್ರಿ ರೊಕ್ಕಾ! (ಅವರು ರೊಕ್ಕಾ ಮುಚ್ಚಲು) ನೋಡೋ ಮಗದುಂಮಾ, ಈ ಮಾತು ಹ್ಯಾಗ ತಿಳೀತಾವs ಅಂತೇನಿ?

**ಮಗದುಂ**— ನಮ್ಮ ಬೆಳಗಾಂವ್ಯಾಗ ಈ ಜಾತೀ ಜನರೇ ತುಂಬ್ಯಾರ ನೋಡಬೇ; ತಮಗೆ ಲಾಭ ಇದ್ದರ ಕನ್ನಡೆಲ್ಲಾ ತಿಳೀತೈತಿ; ಇಲ್ಲದಿದ್ರ ಎದೀ ಸೀಳಿದ್ರೂ ಇವರಿಗೇನು ಕನ್ನಡ ಬರಾಕಿಲ್ಲ; ಇಂಥಾ ಸೋಗಿನ ಜನ ಇವ್ರು! ನೀ ಮಾತ್ರ ಎಚ್ಚರಿರು. (ಮತ್ತೆ ಮೋಟಾರ್ ಹಾರ್ನಿನ ಸಪ್ಪಳ)

**ನರಸಮ್ಮ**— ಇಂಥಾವಕೆಲ್ಲಾ ನಾ ಸೊಪ್ಪು ಹಾಕುವಾಕೇನು? ನಡೀ ನಡೀ, ಹೊತ್ತ ಬಾಳ ಆತು. ಪ್ಯಾಶಿಂಜರ್ ಜನರು ಪುರಸೊತ್ತು ಕೊಡವಲ್ಲರು—(ಎಲ್ಲರೂ ಎದ್ದು ಹೊರಡುತ್ತಿರಲು) ಆದರ ಒಂದ್ಯಾಕು ಗಂಟು ಕಲಾದಗಿಯೊಳಗ ನಮ್ಮನೀಗೆ ಮುಟ್ಸೋವು ಇದ್ದವು. ಒಯ್ದೀಯೇನು? (ಬಸ್ಸಿನತ್ತ ನೋಡಿದಂತೆ ಮಾಡಿ) ಬಸ್ಸಂತೂ ಮಸಾರ ತುಂಬೈತಿ.

**ಮಗದುಂ**— ಈಗೇನು, ಮೊದಲಿನ್ಹಾಂಗ ಯರಗಟ್ಟೀ ಕೂಟಿಗೆ ಪೋಲೀಸರ ಚೆಕಿಂಗ್ ಇಲ್ಲಾ ಏನಿಲ್ಲಾ; ಮತ್ತ ಯುದ್ಧದ ಹೆಸರ್ಲೆ ಎಲ್ಲಾ ಕಡೆಗೂ "ಓವರ್‌ಲೋಡ್" ನಡದೇ ನಡದೈತಿ; ಮತ್ತೀ ಇಬ್ಬರೂ ಪೋಲೀಸರೂ "ಓವರ್‌ಲೋಡ್" ಆಗೇ ಬಂದವ್ರು; ಹತ್ತರ ಕೂಡ ಹನ್ನೊಂದು! ತತಾ ನಿನ್ನ ಗಂಟೂ. (ಅವಳು ಒಳಕ್ಕೆ ಗಂಟು ತರಹೋಗುವಳು. ಆತ ಪೋಲೀಸರಿಗೆ ಕೇಳುವನು) ಕ್ಯಾಜಿ ಬುಡ್ಡೀಕಾ ಚಾರ ಸಾಮಾನ ಲೇಂಗೇ?

**ಪೋಲೀಸರು**— ಹೋ ಹೋ, ಲೋ ಲೋ, ಫ್ಯೂ ಫ್ಯೂ (ಮುದಕಿ ನಾಲ್ಕು ಗಂಟೂ ಒಂದು ಮೇವಿನ ಹೊರೆ ತಂದಿಡುವಳು. ಮಗದುಂಮನ ಹೇಳಿಕೆಯ ಮೇರೆಗೆ ಪೋಲೀಸರೇ ಅವನ್ನು ಹೊತ್ತೊಯ್ಯುವರು)

ಮಗದುಂ— ವ್ಹೋ ಫ್ರಂಟ್ ಸೀಟ್‌ಕೇ ನೀಚೆ ರಕ್ಖದೋ! (ಪೋಲೀಸರಿಬ್ಬರೂ ಹೊರಟುಹೋಗುವರು) ಔರ್, ಉಸಕೋ ಟಾಪ್ ಪರ್ ಡಾಲ್‌ದೋ! ಹಾಂ !

ನರಸಮ್ಮ— ಅಲ್ಲೋ ಮಗದುಂಮಾ, ಅವರ ಕಡೆಯಿಂದ ಹೋಗಿಸಿದೆಲ್ಲಾ ಆ ಗಂಟೂ! ಅಂತೇನಿ!!

ಮಗದುಂ— ಅದರೊಳಗs ಐತಿ, ಮುದಕೀ, ಹಿಕ್ಮತ್ತು!† ಯಾರು, ಮಲ್ಲಣ್ಣ ಕಳಿಸ್ಯಾನೇನು?

ನರಸಮ್ಮ— ಹಂ! ಹೌದು ಹೌದು! ಮಗದುಂಸಾಬಾ! ಇಕಾ, ಮೂರಿಪ್ಪತ್ತು ಮಂದೀ ರೊಟ್ಟೀ ಬಡದು ಆತಗ ಮುಟ್ಟಿಸಬೇಕಾಗ್ಯೈತಿ, ಹೋಗಿನ್ನ ಹೊತ್ತಾತು. (ಮೆಲ್ಲಗೆ) ಮತ್ತ ಆ ಮಾಲು ಮಾತ್ರ ಜೋಕೆ, ಆಂ!! ಇವೊತ್ತು ಸುಲಧಾಳ ಸ್ಟೇಶನ್ನಿನ್ ಹಬ್ಬ ಐತಿ! ಗೊತ್ತೈತಿ ಹೌದಲ್ಲೋ?

ಮಗದುಂ— ಅದರ ಚಿಂತೀ ಬಿಡು ನೀ! ಒಟ್ಟು ಹತ್ಯಾರ§ ಎಷ್ಟು ಶಿಕ್ಕ್ಯಾವಂತ?

ನರಸಮ್ಮ— ಈ ಸಾರೆ ಮನಾರ‡ ಸಿಕ್ಕ್ಯಾವು; ಆ ಬೆಣ್ಣೀ ಗಡಿಗ್ಯಾಗ ೧೨ ಪಿಸ್ತೂಲ ಆದಾವು. ಜೋಳದ ಹಿಟ್ಟಿನ ಗಂಟಿನ್ಯಾಗ ನಾಕಿಪ್ಪತ್ತು ಕಾಡತೋಸು* ಆದಾವು; ಮತ್ತ ದಂಟಿನ ಪೆಂಡಿಯೊಳಗ ೨೧ ಕತಿ ಆದಾವು; ಎಲ್ಲಾ ಹುಷಾರಿಯಿಂದ ಮುಟ್ಟಿಸು. ಮಲ್ಲಣ್ಣಾ, ರಾತ್ರಿ ೧೨ ಘಂಟೇಕ ತನ್ನ ಮಂದಿನ್ನ ಪಾರುಮಾಡಿಕೊಂಡು ಸುಳಧಾಳದಿಂದ ಇಲ್ಲಿಗೆ ಬಂದು ಮತ್ತ ಮುಂದ ಒಂದs ತಾಸಿನ್ಯಾಗ ಕಡಕೋಳ ಸೇರಬೇಕಂತ ಮುಸಲತ್ತು× ಮಾಡ್ಯಾನ. ಅಷ್ಟರಾಗ ನಿಮ್ಮ ಮಂದಿಯೆಲ್ಲಾ ನರಸಾಪುರದ ಅಡವಿಯೊಳಗ, ಸರವಿನ ದಂಡೀಮ್ಯಾಲ "ಹತ್ಯಾರ" ಸಹಿತ ಸಜ್ಜಾಗಿ ಸೇರಿರಬೇಕಂತ! ಶಿರಸಂಗೀ ಜನರು ಒಡಕಹೊಳೀ+ ದಾಟಿ ಮುರಗೋಡದಾಗ ಕೂಡತಾರಂತ. ತಿಳೀತಿಲ್ಲೋ? ಹೋಗಿನ್ನ ಗಡಾನs! ಸಾಮಾ

---

† ಜಾಣತನ; § ಶಸ್ತ್ರಾಯುಧ ‡ ತುಂಬಾ, ಬಹಳ; * cartridges.
× ಯುಕ್ತಿ; + ನವಿಲುತೀರ್ಥ

ನೆಲ್ಲಾ ಜಪ್ಪಿಸಿಕೋ! ಎಂದಿಲ್ಲದ ಇವತ್ತ ಮಿಲಿಟರಿದೊಂದು ಲಾರೀ ತುಂಬಿ ಹೋಗ್ಯೈತಿ ಯಾದವಾಡ ಮ್ಯಾಲಿಂದ ಬಾಗಲಕೋಟೀ ರಸ್ತೇಕ್ಕ.

**ಮಗದುಂ**— ಸಾಮಾನದ ಚಿಂತೀ ಮಾಡಬ್ಯಾಡ ಬಿಡು ನೀ! ಆ ಪೋಲೀಸರನ್ನs ಹಚ್ಚತೇನಿ ಅವನ್ನ ಕಾಯಲಾಕ! ಮತ್ತಿನ್ನೇನು! ಹಂ! ಹಂ! ಹಂ!! ಆದರ ನೀ ಇಲ್ಲಿದೆಲ್ಲಾ ಸಂಬಾಳಿಸಿಕೋ. ನಿನ್ನ ಹುಚ್ಚ ಸೊಸಿ ಏನಾದ್ರೂ ಮಾಡ್ಯಾಳು. ಆಕಿನ್ನಷ್ಟ ಊರಿಗೆ ಕಳಿಸಬಾರದಿತ್ತs? (ಕಿಸೆಯಿಂದ ಸಿಗರೇಟು ತೆಗೆಯುವನು)

**ನರಸಮ್ಮ**— ಆದೂ ಬಗೀ ಹರಿಯಾಣಿಲ್ಲಾ; ಆಕೀ ನೆವದಿಂದ, ಮತ್ತ ಈ ಚಹಾದ ಅಂಗಡೀ ನೆವದಿಂದ ನಮ್ಮ ಕಾಯಕೆಲ್ಲಾ ನಡದೈತಿ. ಅತ್ತಾಗ ಬಾಗಲಕೋಟಿ, ಬಾದಾಮಿಯಿಂದ ಹಿಡಿದು ಇತ್ತಾಗ ಆಳ್ನಾವರ ಗೋಕಾವಿ ತನಕ ಈ ಗುಡಿಸಿಲನಾಗಿಂದ ನಡದೈತಲ್ಲ ಕಾರಬಾರಾ; ನಾವು ಹುಷಾರಿಯಾಗಿರದಿದ್ದರ, ಈಗ ಸುಟ್ಟ ಹೋದ ಹತ್ತಿಪ್ತತ್ತು ಚಾವಡೀ, ಏಳೆಂಟು ಸ್ಟೇಶನ್ನಿನ ಬದ್ಲೀ ನಮ್ಮೀ ಗುಡಿಸಲೂ, ನಾವೆಲ್ಲಾರೂ ಎಂದೋ ಸುಟ್ಟು ಬೂದಿಯಾಗ್ತಿದ್ದೀವಿ!...........ನಿನ್ನ ಸಿಗ್ರೇಟಿಗೆ ಕಡ್ಡಿ ಬೇಕು ಹೌದs; (ತಂದು ಕೊಡುವಳು)

**ಮಗದುಂ**— ಅಲ್ಲಬೇ ಮುದುಕಿ, ಈಗ ನಾಕ ದಿನದ ಹಿಂದ, ನಮ್ಮ ಜನರು ಮಿರಜೀ ದಾರ್ಯಾಗ ಒಂದು ಸ್ಟೇಶನ್ನ್ ಸುಟ್ಟರಲ್ಲಾ; ಆಗ ಪಾಪ ಆ ಸ್ಟೇಶನ್ನ ಮಾಸ್ತರನ ಸಾಮಾನೂ ಸುಟ್ಟೈತೆಂತ; ಅದೊಂದು ಮಾತ್ರ ಇಷ್ಟ ದಿನದಾಗ ನಮ್ಮ ಜನರಿಂದ ತಪ್ಪ ಆತ್ರು ನೋಡು! (ಸಿಗರೇಟು ಸೇದುತ್ತಿರುವನು)

**ನರಸಮ್ಮ**— ತಪ್ಪು ಏನ್ ಬಿಡು! ಮೊದಲs ಆವಗ ನಾವು ಎಚ್ಚರಿಕೆ ಕೊಟ್ಟಾಗ ಆ ಮಂಗಸಂಥಾ ಮಾಸ್ತರಾ ಸೊನ್ನೀ ತಿಳಕೋಬಾರದೂ? ಯಾರಿಗೂ ಇಲ್ಲದ ಕಕಲಾತಿ ಅವಗ್ಯಾಕೋ ಅಷ್ಟ ಸರಕಾರದ ಮ್ಯಾಗ! ಮಡ್ಡ ನನ ಮಗಾ, ಪಿಸ್ತೂಲ ತೋರಿಸೂ ತನಕಾ ಜಾಗಾ ಕಿತ್ತಲಿಲ್ಲಾ! ಅಂತ, ನಮ್ಮದೂ ಆಟು ಕೈತಪ್ಪಿ

ಹೋತನ್ನ; ಆದರ ನಮ್ಮನಮ್ಮವರಡು ಏನೇ ಆದರೂ ಲುಕಸಾನಾ ಮಾಡಬಾರದಂತ ನಮ್ಮ ಮಲ್ಲಣ್ಣಾ ಮುನ್ನೂರು ರೂಪಾಯಿ ಕೂಡಿಸಿ ತಾನs ಕೊಟ್ಟ ಬಂದಾಸಲ್ಲಾ ಆ ಮಾಸ್ತರಗ! ಅವನ್ದೇನು ಗಂಟು ಹೋದಂಗಾತು ಹೇಳು!

**ಮುಗದುಂ**— ನನಗ ಇದರಾಗೆಲ್ಲ ಮಲ್ಲಣ್ಣನ ಎದೀ ಹೆಚ್ಚೋ ನಿನ್ನ ಕಾಯಕ ಹೆಚ್ಚೋ ಅಂತ ದಿಗಿಲs ಬಿದ್ದೈತಿ, ನೋಡು ನರಸಮ್ಮಾ!

**ನರಸಮ್ಮ**— ಅಯ್ಯ! ಕಿತ್ತೂರ ಚನ್ನಮ್ಮನ ಊರಿನಾಕಿ ಆಗಿ, ಸಂಗೊಳ್ಳಿ ರಾಯಣ್ಣನ ಸೊಸಿ ಅನ್ನಿಸಿಕೊಂಡು, ಸಿಂಧೂರ ಲಕ್ಷ್ಮಣನ‡ ಸಾಕಿದ ತಾಯಿ ಆಗಿ, ಈಗ ಅರವತ್ತು ವರ್ಷದ ಮುದುಕಿ ಆದ್ರೂ ಮೋಟಮುರಧಾಂಗ ನಾ ಸೆಟೆದು ಆಡ್ತಾಡುತಿರೋದು ಯಾತಕ್ಕಂತ ತಿಳಕೊಂಡೀಯೋ, ಮುಗದುಮ್ಮಸಾಬಾ! ಇನ್ನೂ ಹತ್ತು ವರ್ಷ ಜೀವದಿಂದ ಇದ್ದು ಆ ಮಾರಾಯರು ನೋಡದ್ದನ್ನ ನಾ ಕಣ್ತುಂಬ ನೋಡೇ ಸಾಯ್ಬೇಕು ಅಂತೇನ್ನೋಡು!

**ಮುಗದುಂ**— ದೇಶದ ತುಂಬೆಲ್ಲಾ ಜನಾ ಹೀಂಗ ಒಂದಾದರ ಕೇಳೀಯಾ!

---

‡ ಮುರಗಟ್ಟೆಯ ದಕ್ಷಿಣ ಹಾಗು ಪೂರ್ವದ ನಾಡು ೧೮೫೭ ರಿಂದ ಹೆಚ್ಚು ಪ್ರಸಿದ್ಧಿ ಹೊಂದಿದ್ದು. ಕಿತ್ತೂರ ಚನ್ನಮ್ಮನ ಹೆಜ್ಜೆಯಲ್ಲೆ ಹೆಜ್ಜೆಯಿಟ್ಟು ಬ್ರಿಟಿಶ್ ಸಾಮ್ರಾಜ್ಯಕ್ಕೆ ಕೊಳ್ಳಿಯಿಟ್ಟವರಲ್ಲಿ ಸಂಗೊಳ್ಳಿ ರಾಯಣ್ಣನೊಬ್ಬ ಹಿರಿಯಾಳು. ಈತನ ಲಾವಣಿಗಳು ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧವಾಗಿವೆ. ಈತನಂತೆಯೇ ಇಟ್ಟ ಕಟ್ಟೀ ಚೆನ್ನನೂ ಈ ನಾಡಿನಲ್ಲೇ ಹೆಸರಾಗಿದ್ದ. ಇಂದಿಗೆ ಇಪ್ಪತ್ತೈದು ವರ್ಷಗಳ ಹಿಂದೆ, ರಾಯಣ್ಣನಂತೆಯೇ ಈ ನಾಡಿನಲ್ಲಿ ಬಡವರ ಕೈವಾರಿಯಾಗಿ ಸರಕಾರದಿಂದ ಪುಂಡನೆಂದು ಕರೆಸಿಕೊಂಡು ಗುಂಡಿಗೀಡಾದ ಬೇಡರ ತರುಣ ಸಿಂಧೂರ ಲಕ್ಷ್ಮಣನ ಕಾರ್ಯಭೂಮಿಯೂ ಇದೇ. ನರಗುಂದ ಬಂಡಾಯದಲ್ಲಿ ಮ್ಯಾನ್‌ಸನ್ ಸಾಹೇಬನ ಕೊಲೆಗಾಗಿ ಹೆಸರಾದ ಸೂರೇಬಾನ ಊರು ಈ ನಾಡಿನದೇ. ಹಿಂದೆ ಶಿವಾಜಿಯನ್ನು ಸೋಲಿಸಿದ ಬೆಳವಡಿ ಮಲ್ಲಮ್ಮನೂ ಈ ಮಲಪ್ರಭಾ ನದಿಯ ನಾಡವಳೇ! ಸಂಗೊಳ್ಳಿ ರಾಯಣ್ಣ, ಕಟ್ಟಿ ಚೆನ್ನ, ಸಿಂಧೂರ ಲಕ್ಷ್ಮಣರು ಈ ನಾಡಿಗೆ Robinhood ಅಥವಾ ದಕ್ಷಿಣ ಕನ್ನಡದ ಕೋಟಿ ಚೆನ್ನಯ್ಯರಂತಿದ್ದಾರೆ. ೧೯೪೨ ರಲ್ಲೂ ಈ ಮಲಪ್ರಭಾನದಿಯ ನಾಡೇ ಕರ್ನಾಟಕದ ಎಲ್ಲ ಭಾಗಕ್ಕಿಂತಲೂ ಹೆಚ್ಚಿನ ಸಾಹಸ ತೋರಿಸಿತ್ತು. ಆರಂಭದಲ್ಲಿದ್ದ ನಕ್ಷೆ ನೋಡಿರಿ.

ಆ ದೊಡ್ಡ ಮನುಷ್ಯ ಗಾಂಧೀ, ಮತ್ತು ಆ ಜವಾಹೀರಲಾಲ ಇವರಿಬ್ಬರನ್ನೂ ಜೇಲಿನಿಂದ ಬಿಡಿಸಿದರೂ ನಮ್ಮ ದೇಶ ನಮ್ಮದಾಧಂಗ ಅಂತ ತಿಳಿ. ಅವರಿಬ್ಬರದೂ ಏನು ಧೊಡ್ಡ ಪುಣ್ಯಾ ಇದ್ದೀತಂತೀ! (ಮತ್ತೆ ಹಾರ್ನು)

**ನರಸಮ್ಮ**— ಅದೇನ್ದೊಡ್ಡ ಮಾತು ಬಿಡು; ನಮ್ಮ ರಾಯಣ್ಣ ಅಂದರ ಗಾಂಧೀ ಇದ್ದಾಂಗ; ಸಿಂಧೂರ ಲಕ್ಷ್ಮಣ ಅಂದರ ಜವಾಹಿರ ಲಾಲ ಇದ್ದಾಂಗ! ಇನ್ನೇನು ಅವರೂ ಸಣ ಪರಮಾಣದವರು; ಇವರು ಅಟು ದೊಡ್ಡ ಪರಮಾಣದವರು........ಅಕಾ ನೋಡು ಆ ಪ್ಯಾಶಿಂಜರು ನಿನ್ನ ಕರಿಯಲಾಕ ಬಂದರು. ಇಕಾ ಹಿಡಿ (ಎದೆಯ ಮೇಯ ಚಂಚಿಯಿಂದ ನಾಶೀಪುಡಿ ಡಬ್ಬಿ ತೆಗೆದು ಕೊಡುವಳು. ಆತ ಅವಸರದಿಂದ ಸಿಗರೇಟು ಆಚೆಗೆ ಚೆಲ್ಲುವನು.) ನಾಶೀಪುಡಿ ಬೇಡಿದ್ದೆಲ್ಲಾ ಹಿಡೀ!!

**ಪ್ಯಾಶಿಂಜರ**— (ಪ್ರವೇಶಿಸಿ) ನಡೀಪಾ ಮಗದುಂಸಾಬಾ, ರಾತ್ರಿ ಆಕ್ಕೆ ಮುಟ್ಟಿಸುತ್ತಿಯೋ, ಹತ್ತಕ್ಕೆ ಮುಟ್ಟಿಸುತ್ತೀಯೋ ಬಾಗಲಕೋಟಿಗೆ, ಇಲ್ಲೇ ಇಷ್ಟೋತ್ತಾತು; ಪ್ರವಾಸ ಮಾಡೋದೇ ಕಷ್ಟ ಈಗಿನ್ದಿನ ದಾಗ! ಈಗಂತೂ ಇಲ್ಲೇ ಮೂರೂ ಸಂಜೆ ಆಗಲಿಕ್ಕೆ ಬಂತು. ಆ ನಿನ್ನ ಕ್ಲೀನರಾ ಮರಗಟ್ಟೀ ಊರಾಗ ಹೋಗಿ ಕುಂತಿದ್ದಾ, ಗರಡೀ ಮನ್ಯಾಗ. ಅವನ್ನೂ ಹಿಡಕೊಂಡು ಬಂದೀವಿ. ನಡಿಯಿನ್ನ ನೀನೂ. ಸಾಕ್ಮಾಡು ಮಾರಾಯಾ ನಿನ್ನ ಹರಟೀನ! (ನಶ್ಯವನ್ನೇರಿಸುತ್ತಿರುವ ಮಗದುಂಮನನ್ನು ಎಳೆದೊಯ್ಯುವನು.)

**ಮಗದುಂ**— ನಮ್ಮ ನರಸಮ್ಮನ ನಾಸೀಪುಡಿ ಏರಿಸಿಗೊಂತ ಕುಂತ್ರ ಮಾತು ಮರಗಟ್ಟಿ ಹೋಗೋವದ! ಹೋಗ್ತೀನಚೇ ಮುದುಕೀ.... (ಹೋಗುವನು)

(ಮುದುಕಿ ಬಸ್ಸು 'ಸ್ಟಾರ್ಟ್' ಆಗಿ, ಹೋಗುವ ವರೆಗೂ ನಿಂತಂತೆ ಮಾಡಿ ಆ ಮೇಲೆ ಒಳಗೆ ಹೋಗುವಳು. ಅಷ್ಟೊತ್ತಿಗೆ ಸ್ವಲ್ಪ ಕತ್ತಲುಕವಿದಂತೆ ಆಗುವದು. ಗುಡಿಸಲೊಳಗಿನ ಮುಸುಕುಗತ್ತಲಲ್ಲಿ ಮುದುಕಿ ಅತ್ತಿತ್ತ ಹೋಗಿ ಬಂದುದರ ಚಟುವಟಿಕೆಗಳು ಕಾಣುತ್ತಿರುವವು. ಸ್ವಲ್ಪ ಹೊತ್ತಿನ ಮೇಲೆ ಮೋಡ ಹರಿದಂತೆ, ಸ್ವಲ್ಪ ಬೆಳಕು ಹೆಚ್ಚುವದು. ಆ ಹೊತ್ತಿಗೆ ಸರಿಯಾಗಿ ಸೊಸೆ, ತಲೆಯ ಮೇಲೆ ಬುಟ್ಟೀ ಹೊತ್ತುಕೊಂಡು ಬರುವಳು. ಒಳಗೆ ಹೋಗಿ ಬುಟ್ಟೀ ಇಳಿಸಿ ಅತ್ತೆ

ಇಲ್ಲದ್ದನ್ನು ಬಗೆದು ಮತ್ತೆ ಹೊರಗೆ ಬಂದು ಕಂದೀಲು ದೊಡ್ಡದು ಮಾಡಿ ಅತ್ತಿತ್ತ ನೋಡುವಷ್ಟರಲ್ಲಿ, ಹೊರಬದಿಯಿಂದ ಮುದುಕಿ ಕೈಯಲ್ಲೊಂದು ತಂಬಿಗೆ ಹಿಡಿದುಕೊಂಡು ಬರುವಳು. ಅವಳನ್ನು ನೋಡಿ ಸೊಸೆಯೇ ಮಾತನಾಡುವಳು.)

**ಸೊಸೆ—** ಯಾಕಬೇ, ಸಂಜೀ ಹೊತ್ತಿನ್ಯಾಗ, ಬಾಗಲಾ ಹಾರದಗದು ಹೋಗೀದೆಲ್ಲಾ.

**ಅತ್ತೆ—** ಇಲ್ಲೆ ಹೊರಗೆ ಹೋಗಿದ್ನೇಳು; ಇಷ್ಟರಾಗ ಏನಾಗ್ಯೈತಿ; ಉಳ್ಳಾಗಡ್ಡೀ ಅದೂ ಎಲ್ಲಾ ತಂದ್ಯಾ? ಪರಬಣ್ಣವರ ಮನಿಗೂ ಹೋಗಿದ್ದೆಂತ ಕಾಣತೈತಿ. ಅದಕ್ಕ ಹೊತ್ತು ಮುಣುಗಿ ಕತ್ತಲಾ ಮಾಡಿಕೊಂಡು ಬಂದಿ. ಬೆಳಗಾಂವೀ ಬಸ್ಸು ಆಗಲೇ ಹೋತು. ಬಾಗಲಕೋಟಿ ಬಸ್ಸು ಇನ್ನೂ ಬರಲೇ ಇಲ್ಲಾ.

**ಸೊಸೆ—** ಬಾಗಲಕೋಟಿ ಬಸ್ಸು ಇನ್ನೇನು ಬಂದೀತೇಳು!

**ಅತ್ತೆ—** ಅದು ಯಾಕs? (ತಂಬಿಗೆ ಇಡಹೋದವಳು ಅರ್ಧಕ್ಕೇ ನಿಲ್ಲುವಳು)

**ಸೊಸೆ—** ಅದಿನ್ನೂ ಲೋಕಾಪುರದ ಹಳ್ಳದ ಆಚೆಗೆ ಐತೆಂತ; ಹಿಂಗಾರೀ ಮಳಿ ಜಗ್ಗಿಹೊಡೆದು ಹಳ್ಳ ಕಟ್ಟೇತೆಂತ. ಹಳ್ಳದ ಪೂಲೇನೋ ಅಪೂಟಾ ಕೆಡವ್ಯಾರಂತ; ಮತ್ತ ಒಂದು ಮೈಲಿನ ತನಕಾ ರಸ್ತೇ ತುಂಬ ದೊಡ್ಡ ದೊಡ್ಡ ಮರಾ ಕಡಿದು ಹಾಕ್ಯಾರಂತ.

**ಅತ್ತೆ—** ಅಯ್ಯ, ಇದೇ ಈಗ ಹೋದ ಬೆಳಗಾಂವಿ ಬಸ್ಸಿನ ಗತೀಯೇನು ಹಂಗಾದರs!

**ಸೊಸೆ—** ಬೆಳಗಾಂವೀ ಬಸ್ಸು ಏನಾರ ಆಗಲೀ! ಬಾಗಲಕೋಟಿ ಬಸ್ಸು ಬಂದರ ಇವರು ಇವತ್ತ ಬಂದಾರೂ ಅಂತ ಮಾಡಿದ್ದೆ. ಇವರು ಇವತ್ತ ಇಲ್ಲಿಗೆ ಬರಾಕs ಬೇಕು ಅಂತ ಊರಾಗೂ ಗುಣುಗುಣು ನಡದೈತಿ.

**ಅತ್ತೆ—** ಅಧ್ಯಾಂಗ ಬಿಡs. ನೀನೂ ಒಳ್ಳೇ ಕಕಲಾತಿಯಾಕಿ ಬಂದಿ. ನನಗ ಗೊತ್ತಿಲ್ಲದ ಮಲ್ಲಣ್ಣ ಹ್ಯಾಂಗ ಬಂದಾನು?

**ಸೊಸೆ—** ಗೊತ್ತಿದ್ರೇನು ಬಿಟ್ಟರೇನು; ಬಸ್ಸs ಬಂದಿಲ್ಲಾಂದ ಮ್ಯಾಲೆ ಅವರು ಬರೋ ಆಶಾನೂ ಮಾಡುವಹಾಗಿಲ್ಲ ಅಂದಂಗಾಯಿತು. ನಮ್ಮ ಊರ ಕಡೇ ಏನ ಸುದ್ದಿ ಐತೋ ಅದೂ ತಿಳಿಲಿಲ್ಲಾ.

**ಅತ್ತೆ**— ಅದ್ಕೇನು ಬಿಡು; ಸುದ್ದಿ ಇಲ್ಲಾ ಅಂದರ ಎಲ್ಲಾ ಸುಕಾನs ಅಂತ ತಿಳೀಬೇಕು. ಅಲ್ಲಾ— ನಿನಗ ಲೋಕಾಪೂರದ ಸುದ್ದಿ ಹ್ಯಾಗ ಗೊತ್ತಾತs? ಆ ಸಾಯುಕಲ್ಲ ಹುಡುಗರು ಊರಾಗೂ ಬಂದಿದ್ರೇನು? ನೀ ಗೌಡರ ಮನಿಗೂ ಹೋಗಿದ್ದಿ ಹೌದs! ನಿನಗ ಇಲ್ಲದ ಕಾರಬಾರಾ ಮಾಡಬ್ಯಾಡಂದ್ರ ಕೇಳೂದುಲ್ಲ! (ತಂಬಿಗೆಯನ್ನು ಒಳಗಿಟ್ಟು ಬರುವಳು)

**ಸೊಸೆ**— (ಅಲ್ಲಿಷ್ಟ ಬಾಳೆಹಣ್ಣಿನ ಸಿಪ್ಪೆ ತೆಗೆಯುತ್ತ) ಸಾಯುಕಲ್ಲ ಹುಡುಗರ್ದೇನು ನನಗೊತ್ತಿಲ್ಲಬೆ; ಆದರೆ ಮಧ್ಯಾಣದಾಗ ಮಿಲಿಟರಿ ಲಾರೀ ಹೋಗಿತ್ತಲ್ಲಾ ಕಲಾದಿಗ್ಗ,— ಅವರಿಗೆ, ಇಲ್ಲಿ ಎರಗಟ್ಟಿಯೊಳಗs ತಪಾಸ ನಡಿಸಬೇಕೂ ಅಂತ ಸುದ್ದಿ ಬಂತಂತ; ಅಂತ ಅವರು ತಿರುಗಿ ಬರೋದ್ರಾಗ ಅವರ್ನ ಅಡ್ಡಗಟ್ಟಬೇಕಂತ ಊರ ಜನರು ಹೀಗ ಮಾಡಿದ್ದರಿಂದ ಬಾಗಲಕೋಟೀ ಬಸ್ಸೂ ಬಂದಿಲ್ಲಂತ. ಎಷ್ಟು ಖರೇಸೋ ಎಷ್ಟು ಸುಳ್ಳೋ!

**ಅತ್ತೆ**— ಹೋಗಲಿ ಬಿಡ ಮಗಳ. ನಮಗ್ಯಾಕದೆಲ್ಲಾ; ಬಸ್ಸ ಬಂದರs ಅಷ್ಟ ವ್ಯಾಪಾರ ಮಾಡಿದಾ; ಇಲ್ಲಿದ್ರ ಶಿವಶಿವಾ ಅಂತ ಕುಂತಾ! ನಡೀ, ಮುಂಜಾನೆ ಬೀಸಿಟ್ಟ ಮೂರು ಪಡಿ ಜೋಳದ ಹಿಟ್ಟು ಹಾಗs ಕುಂತೈತಿ; ಇಬ್ಬರೂ ಕೂಡಿ ರೊಟ್ಟೀ ಬಡದಿಡೋಣ ನಡೀ. ರಾತ್ರಿ ಹತ್ತುಗಂಟೀ ತನಕಾ ಬಸ್ಸ ಬಂತs, ಸರಿ; ಇಲ್ಲದಿದ್ದರ ಅದರ ಆಶಾ ಬಿಡೋಣಂತ. ನಡೀ ದೀಪಾ ಹಚ್ಚು; ಲಕ್ಷ್ಮೀದೇವಿ ಬರೋ ಹೊತ್ತಾತು. ಕರಕ್ಕಷ್ಟು ಮೇವು ಒಗೆದು ಬಾ. ನಾ ಹಿಟ್ಟು ತಗೀತೀನಿ. (ಎನ್ನುತ್ತ ಫಲಾಹಾರದ ಸಾಮಾನು ಮೊದಲಾದವುಗಳನ್ನು ಒಳಗೆ ಒಯ್ಯುತೊಡಗುವಳು; ಸೊಸೆಯೂ ಅವಳಿಗೆ ಅರ್ಧ ನೆರವಾಗಿ ಕರಕ್ಕೆ ಮೇವು ಹಾಕಲು ಹಿತ್ತಿಲ ಕಡೆಗೆ ಹೋಗುವಳು. ಆದರೆ ಸೊಸೆಗೇಕೋ ಮನಸ್ಸಿನಲ್ಲಿ ಮನಸಿಲ್ಲ. ಅವಳು ಮೆಲ್ಲನೇ ಒಳಗೆ ಹೋಗಿ, ದೀಪ-ಹಚ್ಚಿ, ಕರುವಿಗೆ ಮೇವು ಹಾಕಿ ಬರುವಳು. ಹಿತ್ತಿಲಲ್ಲಿ ಹೋದಾಗ ಹಿಂದಿನ ಜೋಳದ ನಿಲುವಿನಲ್ಲಿ ಜನರು ಅಡ್ಡಾಡುತ್ತಿರುವಂತೆ ಅವಳಿಗೆ ಸಂಶಯ; ಆದರೂ ಅಂಜಿಕೆ— ಅಂದಿನ ರಾತ್ರಿ ಬಹಳ ವಿಷಮ ರಾತ್ರಿಯಾದೀತೆಂದು ಅವಳ ತೋರಿಕೆ. ಗಂಡ ಬರುವನೆಂದು ಅವಳಿಗೆ ಅನಿಸುತ್ತಿತ್ತು. ಊರಲ್ಲಿಯ ಜನರ ಪಿಸುಮಾತಿನಿಂದಲೂ

ಅವಳು ತರ್ಕ ಕಟ್ಟಿದ್ದಳು. ಆದರೆ ಮುದುಕಿ ಅವಳ ತರ್ಕಕ್ಕೆ, ಅನಿಸಿಕೆಗೆ ಅನುವು ಗೊಡುತ್ತಿರಲಿಲ್ಲ. ಈ ಮೂರು ನಾಲ್ಕು ತಿಂಗಳಲ್ಲಿ ತನ್ನ ಬೆನ್ನ ಹಿಂದೆ ಏನೇನೋ ನಡೆಯುತ್ತಿದೆ ಎಂದೆನಿಸಿದರೂ ತನ್ನ ಗಂಡನ ಮೇಲಿನ ಅತೀವ ವಿಶ್ವಾಸದಿಂದ ಅವಳು ಯಾವ ಸಂಶಯಕ್ಕೂ ಎಡೆಗೊಟ್ಟಿರಲಿಲ್ಲ. ಆದರೆ, ಕಳೆದ ಹದಿನೈದು ದಿನ ಗಳಿಂದ ಮಾತ್ರ ಅವಳು ಗಂಡನ ಜೀವದ ಬಗ್ಗೆ ತುಂಬ ಭಯಪಟ್ಟುಕೊಂಡಿದ್ದಳು. ಸರಕಾರದವರು ಹಿಂಡುಗಟ್ಟಲೆ ಪೋಲೀಸರನ್ನು ಅತ್ತಿತ್ತ ಅಟ್ಟಿದ್ದೂ ಬೆಳಗಾಂವಿಗೆ ಹೆಚ್ಚಿಗೆ ದಂಡಿನ ತುಕಡಿಗಳು ಬಂದದ್ದೂ ವಿಮಾನಗಳು ಹಾರಾಡಿದ್ದೂ ತನ್ನ ಗಂಡನ ತಲೆಗಾಗಿಯೇ ಎಂಬ ಬಲವಾದ ಭಯ ಇದೀಗ ಅವಳೆದೆಯಲ್ಲಿ ಬೇರೂ ರಿತ್ತು. ಆದರೂ ಅವಳಿಗೆ ಅನಿಸುತ್ತಿತ್ತು,– ಹಡೆದ ಮಗನಿಗಾಗಿ ಮುದುಕಿಗಿಲ್ಲದ ಭಯಕ್ಕೆ ತಾನೇಕೆ ಎಡೆಗೊಡಬೇಕೆಂದು! ಇದೊಂದು ವಿಚಾರವೇ ಅವಳ ಹೃದಯವನ್ನು ಇದ್ದದ್ದರಲ್ಲಿ ತೂಕದಲ್ಲಿ ಇಟ್ಟಿತ್ತು. ಅಂತೇ ಅವಳು ಮನಸ್ಸಿಲ್ಲ ದಿದ್ದರೂ ಮುದುಕಿ ಹೇಳಿದ ಮಾತೆಲ್ಲ ಮಾಡಿ ಬಂದಳು. ಇಬ್ಬರೂ ಕೂಡಿ ರೊಟ್ಟಿ ತಿಂದರು. ಮುದುಕಿ ದಿನಕ್ಕಿಂತ ಅರ್ಧ ರೊಟ್ಟಿ ಹೆಚ್ಚು ತಿಂದದ್ದು ನೋಡಿ ತನ್ನ ಹೆದರಿಕೆ ಅರ್ಥವಿಲ್ಲದ್ದು ಎನ್ನಿಸಿತವಳಿಗೆ. ಸ್ವಲ್ಪ ಹೊತ್ತಿನಲ್ಲಿಯೇ ಇಬ್ಬರೂ ಕೂಡಿ ರೊಟ್ಟಿ ಬಡಿಯುತ್ತ ಕುಳಿತರು. ಅಷ್ಟರಲ್ಲಿ ಒಬ್ಬ ದನಗಾಹಿ, ತೆರೆಯಾಚೆಗೆ, ಕೊಳಲಿ ನೊಡನೆ ಹಾಡುತ್ತ ಹೋಗುವದು ಕೇಳಬರುತ್ತಿದೆ. ಆತನ ಹಾಡಿನ ಪಲ್ಲವಿ:—

**ಓ, ಓೕ, ಓೕೕ,— —ಬಂತು, ಬಂತು, ಬಿರುಗಾಳಿ ಬಂತು**
**ಬಂತೋ ಬಂತು ಬಿರುಗಾಳೀ, ಬಂತು ಬಿರುಗಾಳೀೕೕ—)**

**ಅತ್ತೆ**— (ದನಿಗೇಳಿ) ಇದೂ ಆ ದನಾಕಾಯೋ ದರೆಪ್ಪನ ದನಿಯಲ್ಲೇನs ?

**ಸೊಸೆ**— (ಕೆಲಸದಲ್ಲಿ ತಡೆದು) ಹೌದ್ನೋಡಬೇ; ಯಾಕೋ ಇವೊತ್ತ ಕತ್ತಲಾ ಮಾಡಿ ದನಾ ಅಟ್ಗೊಂಡ ಬಂದ್ನಲ್ಲಾ; (ಆಚೆಗೆ ನೋಡಿ) ಹೌದs ಎಮ್ಮೀ ಮ್ಯಾಗ ಕುಂತ ಹಾಡಿಕೊಂತ ಹೊಂಟಾನ! (ಈ ಅವಧಿಯಲ್ಲಿ ದರೆಪ್ಪನ ಕೊಳಲಿನ ಅಸ್ಪಷ್ಟಧ್ವನಿ ಕೇಳುತ್ತಿರುತ್ತದೆ. ಅವರಿಬ್ಬರ ಮಾತು ಮುಗಿ ಯಲು ಮತ್ತೆ ಹಾಡು:

**ಓ, ಓೕ, ಓೕೕ,— —ಬಂತು, ಬಂತು, ಬಿರುಗಾಳಿ ಬಂತು**
**ಬಂತೋ, ಬಂತು ಬಿರುಗಾಳೀ, ಬಂತು ಬಿರುಗಾಳೀೕೕ!**

**ನೆಲವೆದ್ದು ಕುಂತೈತಿ, ಮುಗಿಲುದ್ದ ನಿಂತೈತಿ।**
**ಕುಣಿಯುತೈತೋ ಗಾಳಿ; ಕುಣಿಯುತೈತೀ!!**
**ಗಿಡಮರಾ ಕಿತ್ತಾಡಿ, ಗಿರಿಗುಡ್ಡ ಸುತ್ತಾಡಿ।**
**ದಣಿಯುತೈತೋ, ಗಾಳಿ, ದಣಿಯುತೈತೀ!!**

**ಬಂತೋ, ಬಂತು, ಬಿರುಗಾಳೀ, ಬಂತು ಬಿರುಗಾಳೀ**
**ಓ, ಓ, ಓ———ಬಂತು ಬಿರುಗಾಳೀ !**

(ಕೆಲಹೊತ್ತು ಕೊಳಲ ಧ್ವನಿ: ಒಡನೆ ಅದಕ್ಕೂ ಆಚೆಯಿಂದ ಮತ್ತೊಂದು ಧ್ವನಿ ಅದೇದಾಟಿಯಲ್ಲಿ ಹಾಡುವದು ಕೇಳಬರುತ್ತದೆ. ದರೆಪ್ಪನ ಕೊಳಲ ದನಿ ದೂರ ದೂರ ಸಾಗಿದಂತೆ ಮಂದಮಂದವಾಗುತ್ತದೆ.

ಎರಡನೇ ಧ್ವನಿ:

**ಓ, ಓ, ಓ——ಬಂತು, ಬಂತು, ಬಿರುಗಾಳಿ ಬಂತು, ಬಂತೋ ಬಂತು ।**
**ತಂತು, ಜಗಕೆಲ್ಲ ಹೊಸ ಸುದ್ದಿ ತಂತೋ ತಂತೂ ॥)**

**ಸೊಸೆ**— ಅಲ್ಲಬೇ ಹಾಡಿನ ದನೀ ಬಿದ್ಲಾತಲ್ಲಾ; ಯಾರವರೂ ?

**ಅತ್ತೆ**— ನಮ್ಮ ಮಠದ ಸ್ವಾಮೇರ ದನಿ ನೋಡಿದು; ದರೆಪ್ಪನ ದನ್ಯಾಗ ದನೀ ಕೂಡಿಸಿ ತಾವೂ ಹಾಡಾಕ ನಿಂತಾರ ಹೌದs ಮಠದ ಮರಡೀ ಮ್ಯಾಗಿಂದ. (ಅವಳೂ, ಸೊಸೆಯೂ, ತಡೆದು ನಿಂತು ಕೇಳುತ್ತಿರಲು, ಸ್ವಾಮಿಯವರ ಹಾಡು ಮುಂದರಿಯುವದು:–

**ಎದ್ದೈತಿ ಬಿರುಗಾಳಿ, ಕ್ರಾಂತಿಗಳ ಹಿರಿಗಾಳಿ ।**
**ಸುತ್ತೈತಿ ಪ್ರಳಯದೊಲು ಮುತ್ತೈತೀ ॥**
**ನಾಡ–ನಾಡಿಸ್ಫುರಣ ಗುಡುಗಾಗಿ ನಡುಗೈತಿ ।**
**ಸಿಕ್ಕವರ, ಮಿಕ್ಕವರ, ತುತ್ತೈತೀ ॥**
**ಬಂತೋ—ಬಂತು ಬಿರುಗಾಳಿ ।**
**ಕುನ್ನಿ-ಮಾನವ ಏಳು ಗುಡುಗಿನಾ ದನಿಗೇಳು ।**
**ಸನ್ನಿಯಿಂದೆಚ್ಚತ್ತು ಕಣ್ಣು ತೆರೆಯೋ ॥**
**ನಿನ್ನಂತೆ ನೂರಾರು ಜನ ಸಿಕ್ಕು ಸುಯ್ಯುವರು ।**
**ಗಾಳಿಯಿದರೊಡಗೂಡಿ ಮುಂದೆ ಸರಿಯೋ ॥**
**ಬಂತೋ ಬಂತು ಬಿರುಗಾಳಿ ।**
**ಬಂತು ಬಿರುಗಾಳಿ ಬಂತು ಬಿರುಗಾಳೀ ॥**

ಕೊನೆಯ ಪಲ್ಲವಿಯಲ್ಲಿ ದರೆಪ್ಪ-ಸ್ವಾಮಿಗಳಿಬ್ಬರ ದನಿಗಳೂ ಬೆರೆಯುವವು. ಹಾಡು ಕೇಳುತ್ತ ಅತ್ತೆ ಸೊಸೆ ಇಬ್ಬರೂ ಕೈಗೆಲಸ ನಿಲ್ಲಿಸಿ, ಮೆಲ್ಲಮೆಲ್ಲನೆ ಹೊರ ಕಿಡಿಕಿಗೆ ಬರುವರು.)

**ಸೊಸೆ**— (ಹಾಡು ಮುಗಿಯಲು, ಮೈಯಲ್ಲಿ ಚಳಿದುಂಬಿದಂತೆ ನಡುಗಿ) ಏನ ಗಾಳಿ ಬಿಟ್ಟೈತೇ ತಾಯಿ ಇವತ್ತ ರಾತ್ರಿ; ಅದರ ಅಬ್ಬರ ಅರ[illegible]ಷ್ಟು ನೋಡ್ !

**ಅತ್ತೆ**— ಗಾಳೀ ಅಬ್ಬರಲ್ಲಾs; ಅತ್ತಾಗ ಊರಕಡಿಂದ ಆ ಸಾಲೀ ಹುಡುಗರ ದನಿ ಬಂತು ನೋಡಿದು!

**ಸೊಸೆ**— (ಕಿಡಿಕಿಯಲ್ಲಿ ಬಾಗಿ ನೋಡಿ) ಹೌದs ಬೇ; ನಾ ಊರಾಗ ಹೋದಾಗ ಹುಡುಗರೆಲ್ಲಾ ಗುಂಪುಗೂಡಿ, ನಾಳೆ ಮುಂಜಾನೇನೋ ಪ್ರಭಾತ ಫೇರಿ ಐತೆಂತ, ಅದರ ತಯಾರಿ ಮಾಡಾಕಂತ ಬಸವಣ್ಣ ದೇವರ ಗುಡ್ಯಾಗ ಮುಕರಿದ್ದವು ನೋಡು; ಆ ಹುಡುಗರ ದನೀನೇ ಇದು.

(ಅವರು ಮಾತಾಡುವಾಗ ಅಸ್ಪಷ್ಟವಾಗಿದ್ದ ಹಾಡಿನ ದನಿ ಮಾತು ಮುಗಿಯುತ್ತಿರುವಂತೆ ಸ್ಪಷ್ಟವಾಗುತ್ತಿರುವದು. ಮಕ್ಕಳ ಹಾಡು:–

**ಏಳಿರೋ, ಏಳಿರೋ, ಏಳಿ, ಏಳಿ, ಏಳಿರೀ ।**
**ನಾಡ ಕರೆಯ ಕೇಳಿರೋ, ಕೇಳಿ, ಕೇಳಿ, ಕೇಳಿರೀ ॥**
**ಏಸು ಏಸು ಜನರು ಈ ನಾಡಿಗಾಗಿ ಸತ್ತರೋ ।**
**ಏಸು ಏಸು ಜನರು ಅವರ ನೆನೆದು ನೆನೆದು ಅತ್ತರೋ ।**
**ಏಸು ಏಸು ತೆರದಿ ತಮ್ಮ ಸುಖದ ಮುಡಿಪನಿತ್ತರೋ ।**
**ನಾಡ ಹರಕೆ ಹೊತ್ತರೋ ।**
**ಪ್ರಾಣ ದಂಡ ತೆತ್ತರೋ ।**
**ಪ್ರಾಣದಂಡ ತೆತ್ತರು ॥**
**ಅವರ ಮೊರೆಯ ಕೇಳಿರೋ, ಏಳಿರೋ, ಏಳಿರೋ ।**
**ಬಂದ ನೋವ ತಾಳಿರೋ, ಏಳಿರೋ, ಏಳಿರೋ**
**ಏಳಿ, ಏಳಿ, ಏಳಿರೀ— ॥**
**ಎಷ್ಟು, ಎಷ್ಟು, ಎಷ್ಟು ಕೊಟ್ಟರಷ್ಟು ಕಡಮೆ ದೇಶಕೇ ।**
**ದುಡಿದ ದುಡಿತವೊಂದೆ ಫಲವು ಕೇಳು ಈ ಪ್ರಯಾಸಕೆ ।**
**ಪಟ್ಟ ಕಷ್ಟ, ಪಡೆದ ನಷ್ಟ ಬುತ್ತಿ ಈ ಪ್ರವಾಸಕೆ ।**
**ಬಂದುದೆಲ್ಲ ಬಂದೆ ಬರಲಿ**
**ಸಾಸಕೊಂದು ನಂಬಿಗಿರಲಿ**
**ಏಳಿರೋ, ಏಳಿರೋ, ಏಳಿ, ಏಳಿ, ಏಳಿರೀ ।**
**ನಾಡ ಕರೆಯ ಕೇಳಿರೋ, ಕೇಳಿ, ಕೇಳಿ, ಕೇಳಿರೀ ॥**)

**ಮುದುಕಿ**— ಏಸು ವೈಜುಂ ಅನ್ನೂ ಹಾಗ ಹಾಡ್ತಾವೀ ಹುಡುಗರೂ; ಹೊತ್ತು ಗೊತ್ತಿನ ಎಚ್ಚರಿದ್ದಾಂಗಿಲ್ಲ ಅವಕೂ!

**ಸೊಸೆ**— ನಾನೂ ಅದಕ್ಕs ಅಂತೀನಿ; ನಾಕ ತಾಸು ರಾತ್ರಿ ಆಯ್ತು; ನೋಡಬಾರದs, ಬುಡುಬುಡುಕೀ ಭರಮಪ್ಪನ ದನೀ!

(ತೆರೆಯಲ್ಲಿ ಬುಡುಬುಡುಕಿಯ ಸಪ್ಪಳ; ನಂತರ, ಬುಡುಬುಡುಕಿಯ ಧ್ವನಿ ಕೇಳ ಬರುವುದು. ಬುಡುಬುಡಿಕೆಯವನ ಹಾಡು:–

**ಕೇಳಿರೋ, ಕೇಳಿರೋ ಕೇಳಿರಣ್ಣಾ; ಕೇಳಿರಣ್ಣಾ ।**
**ಕಾಲಚಕ್ರದ ಕತೆಯ ಕೇಳಿರಣ್ಣಾ; ಕೇಳಿರಣ್ಣಾ ॥**
(ಪಲ್ಲವಿ) **ತಿರುಗ್ತೈತಿ ಕಾಲಾ ತಿರುಗ್ತೈತೀ ।**
**ತಿರುಗ್ತೈತೊ ಕಾಲ ತಿರುಗ್ತೈತಿ ॥**
**ಹಳೆಗಾಲ ಹೊಡಮರಳಿ ಹೊಗತ್ತೈತೋ– ಹೋಗತ್ತೈತಿ ।**
**ಹೊಸಗಾಲ ಬರ್ತೈತಿ ಹೊಸ ನಗೆಯ ತರ್ತೈತಿ– ತರ್ತೈತಿ ॥**
**ಹಣ್ಣೆಲಿ ಉದುರ್ತೈತಿ, ಹಸುರೆಲಿ ಚಿಗುರ್ತೈತಿ ।**
**ಮುಪ್ಪೀನ ಹೆಗಲೇರಿ ಬರ್ತೈತೊ ಹೊಸ ಹರೆಯ– ಬರ್ತೈತೀ ॥**
**ಜಪ್ಪಿಸೀ ನೀ ಮಾತ್ರ ಕಾಲಕ್ಕ ಅನುವಾಗೋ ।**
**ಈ ಕಾಲಚಕ್ರಾದ ಕೊರೆತಕ್ಕ ಸಿಗಬ್ಯಾಡೋ ॥**
**ನನಗೆಣೆಯ ಸಿಗಬ್ಯಾಽಽಡಾ ॥ ***

ನುಡಿಗೊಮ್ಮೆ ಬುಡುಬುಡುಕಿ ಬಾರಿಸುತ್ತ ಭರವುಳ್ಳ ಹಾಡಿನೊಡನೆ ದೂರದೂರ ಸರಿದು ಹೋಗುತ್ತಿರುವಂತೆ ಮುದುಕಿಯು ಆ ಹಾಡನ್ನು ಕೊನೆಯವರೆಗೂ ಟೊಂಕದ ಮೇಲೆ ಕೈಯಿಟ್ಟುಕೊಂಡೇ ಕೇಳುತ್ತಿರುವಳು.)

**ಮುದುಕಿ**— (ಹಾಡು ಕೇಳದಂತಾದ ಮೇಲೆ) ಹೌದ್ ನೋಡು; ಆ ಬುಡಬುಡಕ್ಯಾನ ಮಾತು ಬರಾಬ್ಬರೀ; ಕಾಲಚಕ್ರದ ಕೊರೆತಕ್ಕ ಸಿಗದಂಗ ಬಾಳೋದಽ ಬಾಳ್ವಿ! (ಸೊಸೆಗೆ) ನಡೀಯವ್ವಾ ನಡೀ; ಕೆಲಸಾ ತೀರಿಸಿ ಕೈ ತೆರವು ಮಾಡಿಕೊಳ್ಳೋಣ; ಇವತ್ತಿನ ಕಾಲಚಕ್ರ ನಮ್ಮ ಪಾಲಿಗೆ ಏನ್ ತರತೈತೋ ನೋಡಬೇಕಾಗ್ಯೆತಿ ಇನ್ನು.

(ಇಬ್ಬರೂ ಒಳಸಾಗುತ್ತಿರಲು, ಮುದುಕಿ ಹಿಂದಿರುಗಿ ಇಂಗಿತದ ದೃಷ್ಟಿಯಿಂದ ಬಾಗಿಲು ಕಿಡಿಕಿಗಳತ್ತ ನೋಡುತ್ತ ಮತ್ತೆ ಮುಂದರಿಯುವಳು. ಸೊಸೆ ಇದ್ದ ಬಿದ್ದ ಕೆಲಸ ಪೂರೈಸಿಡುವಳು.)

ಇಷ್ಟೊತ್ತಿಗೆ ರಾತ್ರಿ ನಾಲ್ಕು ತಾಸು ಮೀರಿತು. ಬಾಗಲ್ಕೋಟೆ ಬಸ್ಸು ಬರಲೇ ಇಲ್ಲ. ಕೊನೆಗೆ ಮುದುಕಿ ಟೊಂಕ ಹಿಡಿದುಕೊಂಡು ಬಾಗಿಲಿಗೆ ಬಂದಳು. ಸುತ್ತಲೂ

---

* **ಟಿಪ್ಪಣಿ:** ಇಲ್ಲಿ ಒಂದು ಪ್ರವೇಶ ಮುಗಿದು ಇನ್ನೊಂದು ಆರಂಭವಾದಂತೆ ಎರಡು ಬೇರೆ ಬೇರೆ ಪ್ರವೇಶಗಳನ್ನು ಮಾಡುವ ಬದಲು, ಆ ನಡುವಿನ ನಾಲ್ಕು ಗಂಟೆಗಳ ಸರಿಯುವಿಕೆಯನ್ನು ಈ ಹಾಡುಗಳಿಂದ ಸೂಚಿಸಿದೆ. ಇವನ್ನು ಪಾರ್ಶ್ವ ಸಂಗೀತವಾಗಿ ಉಪಯೋಗಿಸಿಕೊಳ್ಳಬೇಕು.

ಇಣಕಿ ಹಾಕಿದಳು; ಎಲ್ಲೆಲ್ಲೂ ಕಗ್ಗತ್ತಲೆ ಕವಿದು ಮೋಡ ಮೇಲೇರಿ ಬರುತ್ತಿತ್ತು; ಬಿರುಗಾಳಿ ಬಂದೆ ಬಂದೆ ಎನ್ನುತ್ತಿತ್ತು; ಮುಂದಿಕಿ ಬಾಗಿಲು ಇಕ್ಕಿಕೊಂಡು ಗುಡಿಸಲಿನ ನಾಲ್ಕು ಸಿಟ್ಟಿನಲ್ಲಿ ನಿರೀಕ್ಷಿಸಿ ಬಂದಳು. ಸೊಸೆಯೂ ತನ್ನ ಕೆಲಸ ತೀರಿಸಿಕೊಂಡು ಬರುವಳು. ಏರಿ ಬರುತ್ತಿರುವ ಮಳೆಗಾಳಿಯ ಹೊಯ್ಲಲ್ಲಿ ಅವಳೆದೆಯೂ ಹೊಯ್ದಾಡುವುದು. ಮನಸ್ಸಿನಲ್ಲಿ ಸಮಾಧಾನವಿಲ್ಲದೆ ಅವಳು ಅತ್ತಿತ್ತ ಸುತ್ತಾಡಿ ಕೊನೆಗೆ ಕಿಡಿಕಿಯೊಂದರಲ್ಲಿ ನೋಟವನ್ನು ನಾಟಿಸಿ ನಿಂತುಕೊಳ್ಳುವಳು. ಮುಂದುಕಿ ಒಂದು ಕೌದಿ ಹೊದ್ದುಕೊಂಡು ಒಂದು ಮೂಲೆಯಲ್ಲಿ ಕೂಡುವಳು.)

**ಸೊಸೆ**— (ಕಿಡಿಕಿಯಲ್ಲೇ ಕಣ್ಣಾಡಿಸಿ) ಅತ್ತೆವ್ವಾ, ಇಂದಿನ ರಾತ್ರಿ ಬಾಳ ಭಯಂಕರ ಕಾಣತೈತಿ ನೋಡಬೇ!

**ಅತ್ತೆ**— ಹೌದ್ ನೋಡು, ಹಿಂಗಾರಿ ಮಳಿ ನಮ್ಮೂರಿಗೆ ನಿಲುಕೀತೋ ಇಲ್ಲೋ ಅಂತ ಎಲ್ಲಾರೂ ಅಂತಿರುವಾಗ ಈ ಮಳಿ ಗಾಳಿ ಎಂದಿಲ್ಲದೆ ಇಂದೇ ಎಷ್ಟು ಏರಿ ಬಂತು! ಈ ಸ್ವಾತೀ ಮಳೀ ನಮ್ಮೂರಿಗೆ ಬಂದ್ರ ನೀರಿನ ಅರಬಸ† ಆಗಾಣಲ್ಲಾ. (ಎದ್ದು ಬಂದು ಕಿಡಿಕಿಯಿಂದ ಹೊರಗೆ ನೋಡುತ್ತ) ಆಲಲ; ಏನಿದು ಗುಡುಗು-ಮಿಂಚಿನ ಜೋರು; ಆದs, ಆದs, ಕೊರಕೊಪ್ಪದಕಡಿಂದ ಮಳೀ ಏರಿ ಬರಾಕ ಹತ್ತ್ಯೈತಿ! (ಇಬ್ಬರೂ ಹೊರನೋಡುತ್ತಿರುವರು.)

**ಸೊಸೆ**— ಏನಿದರ ಆರ್ಭಾಟಾ; ಸನೇದರಾಗ ನಾ ಏನು ಇಂಥಾ ಮಳೀ ಗಾಳಿ ನೋಡಿದ್ದಿಲ್ಲ, ತಾಯಿ; ಏನ ಕನಸು ಮನಸಿನೊಳಗ ಇಲ್ಲಗ ಪುರಮಾಸಿ ಬಂತ ನೋಡೀ ಮಳೀ! ಕಿಡಿಕ್ಯಾಗಿಂದ ನೋಡಿದ್ರ ರಸ್ತೇದ ಆಚೆಗೆ ಏನೈತೊ ಕಾಣೂಹಾಗಿಲ್ಲ!

**ಅತ್ತೆ**— (ಹಿಂದಿರುಗಿ) ಆತು ಬಿಡು ಚಲೋದಾತು; ದೇವರೂ ಕೂಡಿಸಿ ಕೊಟ್ಟಾ! (ಆನಂದದಿಂದ) ಇನ್ನ ಆ ಮಿಲಿಟರೀ ಜನರು ಎಷ್ಟ ಹಾರಾಡಿದರೇನು! (ಮಾತನಾಡುತ್ತ ಮತ್ತೆ ತನ್ನ ಮೂಲೆಯಲ್ಲಿ ಹೋಗಿ ಕೂಡುವಳು.)

**ಸೊಸೆ**— ಆಂ! (ಒಮ್ಮೆಲೆ ಹಿಂದಿರುಗಿ) ಏನಂದಿಬೇ—ಮಿಲಿಟರಿಯುವರೇನು? ಆಂ!

---

† ಕೊರತೆ, ಬರ

**ಅತ್ತೆ**— ಏಸಿಲ್ಲೇಳು! ಪಾಪ, ಇಂಥಾ ಮಳ್ಯಾಗ ಸಿಕ್ಕವರು ಪಾರಾಗೋದು ಕಠಿಣಾ ಅಂದೆ!

**ಸೊಸೆ**— ಮತ್ತೇನೋ!........ಚಲೋದಾತು ಅಂದೆಲ್ಲಬೇ!

**ಅತ್ತೆ**— ಚಲೋ ಅಲ್ಲೇನು ಮತ್ತ! ಮಳಿ ಆದರ ಕೇಡಲ್ಲಂತ, ಮಗಾ ಉಂಡರ ಕೇಡಲ್ಲಂತ!

**ಸೊಸೆ**— ಆ ಉಣ್ಣೋ ನಿನ್ನ ಮಗನೇ ಬರಲಿಲ್ಲಲ್ಲಾ! ಅವರದs ನನಗ ಎದೆಯಾಗ ಸಣ್ಣಾಗಿ ಮಿಟಾಕ ಹತ್ತ್ಯೈತಿ. ಅವರೇನು ಇವತ್ತ ಬರತಾರೋ ಇಲ್ಲೋ ಹೇಳಿರ ಹೇಳು ನನ್ತಾಯೀ! (ಮುದುಕಿ ಹತ್ತರ ಹೋಗಿ ಅರ್ಧ ಕುಳಿತುಕೊಂಡು ಅವಳ ಮೊಳಕಾಲು ಅಲ್ಲಾಡಿಸುತ್ತ ಕೇಳುವಳು).

**ಮುದುಕಿ**— (ಶೂನ್ಯ ದೃಷ್ಟಿಯಿಂದ ಎದುರಿಗೇ ನೋಡುತ್ತ ಸ್ಥಿರವಾದ ದನಿಯಲ್ಲಿ) ಬರತಾನ; ಬರತಾನ! ಮಲ್ಲಣ್ಣ ಇವತ್ತ ಬಂದs ಬರತಾನು!

**ಸೊಸೆ**— (ಅತಿ ಉತ್ಸುಕತೆಯಿಂದ) ಬರತಾರೂ! ಖರೇ ಅಂದ್ರೂ ಬರತಾರೇನಬೇ! ಇವತ್ತಿನ ರಾತ್ರಿ ಇಲ್ಲೇ ಇರತಾರ ಹೌದಲ್ಲೋ! ಐನಸ ಶಿವನs! ಎಷ್ಟು ದಿವಸದ ಮ್ಯಾಗ........! (ಮಗ್ನತೆಯ ಮೌನದಿಂದ ಕೂಡುವಳು.)

**ಮುದುಕಿ**— (ಮೊದಲಿನ ದನಿಯಲ್ಲೇ) ಅದೇನು ಇರತಾನೋ ಬಿಡತಾನೋ ಹೇಳಾಕ ಬರೂದುಲ್ಲ ತಂಗೀ! ಆದ್ರ, ನೀ ಮಾತ್ರ ಬಹಾಳ ಹುಷಾರಿಯಿಂದ ಇರಬೇಕು, ಅಂ! ನೋಡು! ಜೀವದ ಮ್ಯಾಗಿನ ಪರಸಂಗ ಐತಿ. ಹೆಚ್ಚಿಗೆ ಕೇಳಬ್ಯಾಡಾ, ಕೇಳಿದ್ದು ಕಿವಿಯೊಳಗಿಟ್ಟುಕೋಬ್ಯಾಡಾ! ಯಾರೇನಂದ್ರೂ ಒಂದು ತುಟಿ ಎರಡು ಮಾಡಬ್ಯಾಡಾ ತಿಳೀತಿಲ್ಲೋ! ಬಹಾಳ ಹುಷಾರೀ, ಅಸ್ನಿ!! ಇಲ್ಲದಿದ್ರ, ಅಕಾ...........ಅಕಾ...........ಹೌದs ಗಾಳೀ ಹೊಡತಕ್ಕ ಆ ಹುಲಗಲೀ ಗಿಡಾ,—ಕೇಳಿಸ್ತಿಲ್ಲೊ,—ಹ್ಯಾಗ ಕಿತ್ತಿ ಬಿತ್ತು ನೋಡು ಬೇರದರಸೇ;‡ (ಹೊರಗೆ ಗಿಡ ಬಿದ್ದ ಸಪ್ಪಳ),— ಅಕಾ ಹಾಗs ನಾನೂ, ನೀನೂ, ನಿನ್ನ ಗಂಡಾ ಎಲ್ಲರೂ ಒಮ್ಮ್ಯಾಕs× ದಾರೀ ಕಡೆತನಕಾ!

---

‡ ಬೇರುಸಹಿತ. × ಒಮ್ಮೆಲೇ.

**ಸೊಸೆ**— ಅವರ ಜೀವನ್ದಸಿಂದ ನಾಯೇನ್ ಬೇಕಾದದ್ದು ಮಾಡತೇನಿ ಬಿಡು ಮುದುಕೀ! ಆದರ ಅಂಥಾದ್ದೇನು ಬಂದೈತಿ ಈಗ, ಹೇಳಿರ ಹೇಳಲ್ಲಾ!

**ಮುದುಕಿ**— ಅಂಥಾದ್ದೇನು ಬಂದಿಲ್ಲಾ; ಸಾವಿರ ಪಾಲಿಗೆ ಬರಾಕಿಲ್ಲಾ. ಈ ಸಾಳೀ ಬಂದು ಎಲ್ಲಾ ಅನುಕೂಲs ಆಗೈತಿ ಅನ್ನು! ಆದರ ಪಕ್ಕಸ ಒಂದು ವ್ಯಾಳ್ಯಾಕ್ಕ ಏನಾದರೂ ಅಂಥಾದ್ದು ಬಂದ್ರs— ಅಂದೆ.

**ಸೊಸೆ**— ಆದ್ರ ಇವರು ಯಾವಾಗ ಬರತಾರಿನ್ನ ಹೇಳಬೇ! ಬಾಗಲ್ಕೋಟಿ ಬಸ್ಸs ಬರದಿದ್ರ........ಇನ್ನs........

**ಮುದುಕಿ**— ಆತಗ ಆ ಬಸ್ಸಿಗೆ ಏನ ಸಂಬಂಧ ಬಿಡು........ಸರಿರಾತ್ರಿಗೆ ಸರೀ ಅಂತ ಬರತಾನು! ನೀ ಅಷ್ಟು ಗಡಿಬಿಡಿ ಮಾಡದ ಗಪ್ಪಿರು!

**ಸೊಸೆ**— ಹಾಗಾದರೆ ಕಿಡಿಕೀ ತುದಿಗೆ ಕಂದೀಲಾದರೂ ಇಡಲ್ಯಾ; (ಕಂದೀಲೊಡನೇ ಏಳುತ್ತ), ಇಂಥಾ ಕತ್ತಲಾಗ ಈ ಗುಡಿಸಲ ಕಂಡೀತಾಡ್ರ್ಯಾ ಹ್ಯಾಗ?

**ಮುದುಕಿ**— ಛೀ ಹುಚ್ಚೀ; ಎಲ್ಲಾ ಗಾತಾ ಮಾಡೀ ಎಲ್ಲಾದರೂ; ತತಾ ಇಲ್ಲಿ ಆ ಕಂದೀಲು; ಸಣ್ಣ ಮಾಡಿ ಆ ಮೂಲ್ಯಾಗಿಟ್ಟು, ಇಲ್ಲೆ ನನ್ನ ಹತ್ತಿರ ಬಂದು ಕೂಡು; ಪಿಟ್ಟ್ ಅಂದಗಿಂದೀ; ಇವತ್ತಿನ ರಾತ್ರಿ, ಈ ನಮ್ಮ ಗುಡಿಸಲು ಎಲ್ಲಿ ಐತಿ ಅಂತ ಬ್ರಹ್ಮದೇವರಿಗೂ ದಿಕ್ಕ ತಪ್ಪಿರಬೇಕು ನೋಡು!

**ಸೊಸೆ**— ಹಾಗಾದರ, ಆವರ ಗತೀ! (ಕಂದೀಲನ್ನು ಹಿಡಿದೇ ನಿಂತಿರುವಳು.)

**ಮುದುಕಿ**— ಆ ಭರಮಪ್ಪಗ ತಿಳಿಯುದ್ದೂ ನಮ್ಮ ಮಲ್ಲಣ್ಣಗ ತಿಳೀತೈತಿ ಅಂತs, ಇಂಥಾ ಗಟ್ಟ್ಯಾಳ್ಳ ಸರಕಾರದ ತಲೀವ್ಯಾಗ ಮೂರು ತಿಂಗಳಾತು ಮೆಣಸು ಅರಿಯಾಕ ಹತ್ಯಾನು........!

**ಸೊಸೆ**—(ದುಡುಕಿ) ಅಂ, ಏನಂದಬೇ........ಸ—ರ—ಕಾ—ರ!

**ಮುದುಕಿ**— (ಬೆದರಿಸಿ) ಚುಫ್, ಚುಫ್, ಕೇಳಿದ್ದು ಕಿವಿಯೊಳಗ ಇಡ ಬ್ಯಾಡಾ ಅಂತ ಹೇಳೇನಿಲ್ಲೊ! ಸುಮ್ಮಗಿರು!! ಇವತ್ತಿನ ರಾತ್ರಿ ಒಂದು ನಮ್ಮ ಲೆಕ್ಕದ ಪ್ರಕಾರ ಪಾರಾದರ ಈ ಮೂರು ತಿಂಗಳು

ನಮ್ಮ ಮಲ್ಲಣ್ಣ ಕಷ್ಟಬಟ್ಟಿದ್ದೂ ಸಾರ್ಥಕಾದೀತು! .......ಏ, ಆ ಕಂದೀಲಿಲ್ಲಿ ತತಾ; ಸಣ್ಣ ಮಾಡಂದರ ಇಷ್ಟು ದೊಡ್ಡದು ಇಡ ಬೇಕೇನs? (ತಾನೇ ಬಾಗಿ ಅದನ್ನು ಅವಳ ಕೈಯಿಂದ ತಕ್ಕೊಂಡು ತೀರ ಸಣ್ಣದು ಮಾಡುವಳು; ಕೋಣೆಯಲ್ಲಿ ಕತ್ತಲು ಹೆಚ್ಚುವದು; ಮುದುಕಿ ತುಸು ತಡೆದು, ಮತ್ತೆ ಅರ್ಧ ಮೇಲೆದ್ದು ಕಿಡಿಕಿಯಲ್ಲಿ ಕಣ್ಣಾಚಿ ನೋಡುವಳು. ಕೆಲ ಹೊತ್ತು ಎಲ್ಲೆಲ್ಲೂ ನಿಸ್ತಬ್ಧ. ಆಮೇಲೆ ಮುದುಕಿ ಬಾಗಿಲು ಬಳಿ ಹೋಗಿ ಕಿವಿ ಗೊಟ್ಟು ಕೇಳುವಳು, ಮತ್ತೆ ಹಿಂದಿರುಗಿ ತನ್ನ ಸ್ಥಳದಲ್ಲಿ ಬಂದು ಕುಳಿತುಕೊಳ್ಳು ವಳು. ತುಸು ತಡೆದು, ಅತ್ತಿತ್ತ ನೋಡಿ ಸ್ವಲ್ಪ ಆಸುಮಾಸಿಸಿ.. . .. ..... ) ನೋಡ್ತಂಗೀ! ಬರಾಬ್ಬರಿ ಸರಿ ರಾತ್ರಿಗೆ ಎರಡು ಸಿಳ್ಳು ಕೇಳತಾವ. ಆಗ ನೀ ಆ ಕಿಡಿಕಿ ಹತ್ತರ ಕಂದೀಲು ಒಯ್ದು ಅರ್ಧ ದೊಡ್ಡದು ಮಾಡಿ ಅಲುಗಾಡಿಸು ಮೂರು ಸಾರೆ; ಮತ್ತೆ, ಸಣ್ಣ ಮಾಡಿ ಕೆಳ ಗಿಡು; ಮತ್ತೂ ಎರಡು ಸಿಳ್ಳು ಕೇಳಿದರ, ಮತ್ತ ಹಾಗs ಮಾಡು! ಒಂದs ಸಿಳ್ಳು ಕೇಳಿದರ ಮಾತ್ರ, ಸುಮ್ಮಗಿರು; ಅಂ ತಿಳೀತಿಲ್ಲೊ? ಆಗ ಮತ್ತ ನನ್ನ ಕರೀಬ್ಯಾಡಾ! ನಾಯೆಲ್ಲಿದ್ದೇನು ಅಂತ ನೋಡ ಬ್ಯಾಡ! ತುಟೀ ಬಿಚ್ಚಿಗಿಚ್ಚೀ! ನೋಡು ತಿಳೀತಿಲ್ಲೋ........ಹೂಂ ಹೂಂ; "ಅಂ" ಅಂದಗಂದೀ........ಸುಮ್ಮ—ಸುಮ್ಮ........!....

**ಸೊಸೆ**— (ಸ್ವಲ್ಪ ತಡೆದು ಅರೆಗಾಬರಿಯ ದನಿಯಲ್ಲಿ) ಹಾಗ ಮಾಡಿದ್ರ ಅವರು ಬರತಾರೂ?

**ಮುದುಕಿ**— ಬಂದರ ನಮ್ಮ ದೈವ, ಬರದಿದ್ದರ ಸರಕಾರದ ದೈವ! ನೋಡ ಬೇಕು. ನೋಡಬೇಕು ಯಾರ ನಸೀಬ ಹ್ಯಾಂಗ ಐತೆಂತ. (ಸೊಸೆ ಮಾತನಾಡ ಹೋಗಲು.... ...ಅವಳನ್ನು ತಡೆದು) ಅಕಾ ಏನೋ ಸಪ್ಪಳಾಯಿ ತೇನs! ತಡೀ! (ಕಿವಿಗೊಟ್ಟು ಕೇಳುವಳು.)

**ಸೊಸೆ**— ಇಂತಾ ಗಾಳಿ ಅಬ್ಬರದಾಗ ಡೊಳ್ಳು ಹೊಡೆದರೂ ಕೇಳಲಿಕ್ಕಿಲ್ಲ.

**ಮುದುಕಿ**— ಅದ್ಯಾಕ ಸುಮ್ಮಗಿರು ನೀ! ವಟಗುಟ್ಟ* ಬ್ಯಾಡಾ! ಜೀವದ ಹಂಗು ತೊರೆದರ ಕೇಳದ್ದೂ ಕೇಳಿಸೀತು, ಕಾಣದ್ದೂ ಕಂಡೀತು! ತಿಳೀತs!! ಅವಾ ಹೇಳಿಧಾಂಗ ಮಾಡೂದಷ್ಟೇ ನಮ್ಮ ಕೆಲಸಾ! ಅಷ್ಟ ತಿಳಕೋ. ಹೋಗ್ನೋಡು; ಒಲೀ ಕೆಂಡಾ ಅಷ್ಟು ಕೆದರಿ ಬಾ!

* ಗುಣುಗುಣು ಮಾಡಬೇಡ.

**ಸೊಸೆ**— ಅತ್ತಾಗ ಅವರ ಚಿಂತೀ; ಇತ್ತಾಗ ಈ ನಿನ್ನ ಮಾತೂ! ಮ್ಯಾಲ ಈ ಭರಗುಡುವ ಗಾಳೀ........ಇವೆಲ್ಲಾದರಿಂದ ನನ್ನ ಕಾಲನs ಏಳದಾಂಗಾಗ್ಯಾವು! ಈ ಗಾಳೀ ಗೋಳಾಟ ಅಂತೂ ಕೇಳಲಾಸಲ್ಲ; ದಾರೀ ತಪ್ಪಿದ ಪರದೇಶಿ ಕೂಸೊಂದು ನಮ್ಮ ಕದಾ ತಟ್ಟ್ಯೊ ಹಾಗs, ನಾವದನ ಕದಾ ತಗೀದs ಹೊರಗ ಅಟ್ಟ್ಯ ಹಾಗs ನನಗೆ ಅನಿಸಲಾಕ ಹತ್ತ್ಯೈತಿ ನೋಡು!

**ಮುದುಕಿ**— (ಸಿಟ್ಟಿನಿಂದ) ಹೋಗ್ ಇರಲಿ; ಮೂಳನ ಹಾಗ ಮಾತಾಡ ಬ್ಯಾಡಾ; ಒಲೀ ಬೆಂಕಿ ಆರಿಗೀರೀತೂ; ಕೆದರಿ ಕುಳ್ಳಿನ* ಚೂರು ಚೆಲ್ಲಿ ಬಾ.

**ಸೊಸೆ**— (ಮೆಲ್ಲನೆದ್ದು ಆಸುಮಾಸಿಸುತ್ತಿರಲು, ಒಮ್ಮೆಲೆ ತಡೆದು.......) ಹಾಂ! ಏನದೂ???........(ಎನ್ನುತ್ತಲೆ ಇಬ್ಬರೂ ಕಿವಿಗೊಟ್ಟು ಕೇಳುವರು.)

**ಮುದುಕಿ**— ಬರೇ ಗಾಳಿ ಬಿಡು. ಮತ್ತೊಂದು ಗಿಡಾನೋ ಟೊಂಗಿಯೋ ಮುರಿದು ಬಿತ್ತು ಕಾಣತೈತಿ! ಈ ಗಾಳೀನು ಆಸುಗೊಂಡೀತs? ಇಂತಾದರಾಗ ಗುಡ್ಡದ ಪಡವಿನೊಳಗ‡ ಕಾಲಾ ಕಳಿಯೋ ನಮ್ಮ ಜನರ ಗತಿ ಏನೂ ಅಂತೀನಿ! ಅದ್ರ ಮಿಲಿಟರೀ ಜನರದೂ, ಪೋಲೀಸರದೂ ಅಂಜಿಕೀನೂ ಅಷ್ಟೇ ತಪ್ಪಿದಾಂಗ ಆತು. ಗೆದ್ದರ ಆಡಾಕ ಬಂದಿದ್ವಿ, ಸೋತರ ನೋಡಾಕ ಬಂದಿದ್ವಿ........ ಅಂತ, ಸರಕಾರದ ಜುಲುಮಿಗೆ ಸಿಕ್ಕು ಬಂದ ಈ ಮಿಲಿಟರಿ ಅವರೂ, ಪೋಲೀಸರೂ ಈ ಮಳಿ ಗಾಳೀ ಸಂಗಾಟ ಏನು ಗುದ್ದ್ಯಾಡಿಯಾರು? ನಮ್ಮ ಜನಕ್ಕೊಂದು ಬಿಟ್ಟಿದ್ದಲ್ಲಾ. ದೇಶದ ಬೆನ್ನು ಕಟ್ಟಿದ ಮ್ಯಾಗ!........ಅಲ್ಲs, ನೀ ಊರಾಗ ಹೋದಾಗ, ಅಲ್ಲೇನಾದ್ರೂ ಪೋಲೀಸರು ಗೀಲೀಸರು ಬಂದಿದ್ರೇನss!

**ಸೊಸೆ**— ಛೀ ಇಲ್ಲ ಬಿಡು! ನಾ ಬರೋವಾಗಂತೂ ದಾರ್‍ಯಾಗ ಒಂದು ಪಿಳ್ಳೆ ಇರಲಿಲ್ಲ; ಮರಡಿ ಅಂತೂ ಮಸಣದ ಹಾಗಿದ್ದವು.

**ಮುದುಕಿ**— (ಅವಳನ್ನು ತಟ್ಟನೇ ತಡೆದು) ಏ, ಸುಮ್ಮಗಿರು ಈಟು. (ಸಿಳ್ಳಿನ ದನಿ

---

* ಬೆರಣಿ; ‡ ಓಣಿ.

ಕೇಳಿಸುವದು. ಇಬ್ಬರೂ ಸ್ವಲ್ಪ ಹೊತ್ತು ನಿಧಾನಿಸುವರು.) ತಗೋ ದೀಪಾ.' ತಗೋ ಗಡಾನ ಕೈಯಾಗ!

**ಸೊಸೆ—** ಆದರ, ಸಪ್ಪಳ, ಇತ್ತ್ಯಾಗ ಮರಡೀ ಕಡಿಯಿಂದ ಬಂತಬೇ....!

**ಮುದುಕಿ—** ಚುಪ್, ಚುಪ್, ಹೇಳಿದಷ್ಟು ಮಾಡು ನೀ! (ಸೊಸೆ ಕಿಡಿಕಿಯ ಹತ್ತಿರ ಕಂದೀಲು ಒಯ್ದು ಮೂರು ಸಲ ಹೊಯ್ದಾಡಿಸುವಳು. ಆಮೇಲೆ ಕಂದೀಲನ್ನು ಹಾಗೇ ಹಿಡಿದುಕೊಂಡು ಬಾಗಿಲ ತೆಗೆಯ ಹೋಗುವಳು; ಮುದುಕಿ ತಟ್ಟನೇ ಓಡಿ ಬಂದು ಅವಳನ್ನು ಅಡ್ಡಗಟ್ಟುವಳು.) -- ಯಾಕss! ಬೇಬರಸೀ! ನಿನಗ ಜೀವಗೀವ ಬ್ಯಾಡಾಗ್ಯೆತೇನು? ಇಂತಾ ಕೆಲಸಾ ಮಾಡಿದಿ ಅಂತ ಕೇಳಿದನಂದರss, ಮಲ್ಲಣ್ಣ ನಿನ್ನ ಒಂದss ಹೊಡತಕ್ಕss ಕಡದು ಎರಡು ಹೋಳು ಮಾಡ್ಯಾನು! ತಾಯಿಲ್ಲೆ ದೀಪಾ! ಎಲ್ಲಿ ಇಟ್ಟೀ ಬುದ್ಧೀ? ನಾ ಹೇಳಿದ್ದೇನು—ನೀ ಮಾಡೋದೇನು! ಅಲ್ಲಾ ಹೀಗ ಕೈಯಾಗ ದಣದಣಾ ದೀಪಾ ಹಿಡಕೊಂಡು ಕದಾ ತಗದರ ಮೂರು ಮೈಲಿನ ಆಚೆಗೆ ಕಂಡೀತು ಇಲ್ಲಿ ನಡೆದದ್ದೆಲ್ಲಾ! ತಗೀ ದೀಪಾ ಸಣ್ಣದು ಮಾಡು! (ಅವಳು ಹಾಗೇ ಮಾಡಲು, ಕೋಣೆಯಲ್ಲಿ ಮತ್ತೆ ಕತ್ತಲು ಹೆಚ್ಚುವದು; ಅಷ್ಟರಲ್ಲಿ ಮತ್ತೆ ತೀರ ಹತ್ತಿರದಲ್ಲೇ ಎರಡು ಸಲ ಸಿಳ್ಳಿನ ದನಿ ಕೇಳುವದು. ಮುದುಕಿಯ ಸೊನ್ನೆಯ ಮೇರೆಗೆ ಸೊಸೆ ಮತ್ತೆ ಮೊದಲಿನಂತೆ ದೀಪ ತೋರಿಸಿ ಆರಿಸುವಳು. ಅರೆಕ್ಷಣದ ಮೇಲೆ ಬಾಗಿಲು ತಟ್ಟಿದಂತಾಗುವದು. ಮುದುಕಿ ಬಹಳ ಸಾವಧಾನದಿಂದ ಬಾಗಿಲು ಮೆಲ್ಲನೆ ತೆರೆಯಲು ಮಲ್ಲಣ್ಣ ಕೂಡಲೇ ನುಸುಳಿ ಒಳಗೆ ಬಂದು, ಸೀರಿಸಿಂದ ತಪತಪ ತೊಯ್ದ ಗೊಂಗಡಿಯನ್ನು ಹೆಂಡತಿಯ ಕೈಗೆ ಕೊಟ್ಟು, ಧೋತರ ಹಿಂಡಿಕೊಳ್ಳುವನು; ಅಂಗಿ ಜಾಡಿಸಿಕೊಳ್ಳುವನು.)

**ಸೊಸೆ—** (ಹತ್ತಿರ ಬಂದು) ಏನೆಲ್ಲಾ ತೊಯ್ದು ತಪ್ಪಡಿ ಆಗೀರಲ್ಲಾ; ಮೈಸೂ ತೋಯ್ದು ತಣ್ಣಗಾಗ್ಯೆತಿ.

**ಮಲ್ಲಣ್ಣ—** (ಹೂಗುಡುತ್ತ, ಅವಳ ಕೈ ಆಸರದಿಂದ, ದಣಿದ ತನ್ನ ಮೈಯನ್ನು ಜೋಲಿಸುತ್ತ, ಹತ್ತಿರದ ಬಾಕಿನ ಮೇಲೆ ಕುಳಿತುಕೊಳ್ಳುವನು.—ಹೆಂಡತಿಗೆ ಸುಮ್ಮನಿರೆಂದು ಸನ್ನೆ ಮಾಡುವನು. ಮುದುಕಿ ಬಾಗಿಲು ಇಕ್ಕಿ, ಎರಡೂ ಕಿಡಿಕಿಗಳಿಂದ ಏನೋ ನೋಡಿದಂತೆ ಮಾಡಿ ಅವೆರಡನ್ನೂ ಇಕ್ಕಿ, ದೀಪವನ್ನು ತುಸು ದೊಡ್ಡದು ಮಾಡಿ ಮತ್ತೊಂದು ಗೊಂಗಡಿ ತಂದು ಮಗನಿಗೆ ಕೊಟ್ಟು ಆತನ ಹತ್ತಿರವೇ ಕುಳಿತುಕೊಳ್ಳುವಳು; ಮಲ್ಲಣ್ಣ ಅವಳನ್ನು ಮಾಲಿಸುತ್ತ—) ನೋಡಬೇ

ಯುವ್ವಾ! ಹಳ್ಳದ ಎರಡೂ ಕಡೆ ಮಿಲಿಟರಿ ಕಾವಲು ಇವತ್ತ; ಅಂತ ಹಳ್ಳಾ ಈಸಗೋತ ದಾಟಿ ಬರಬೇಕಾತು; ಹಳ್ಳಾ ದಾಟಿ ಬರೋದರಾಗ ಮಳೀ ಆಟು ಏರಿ ಬಂತು. ಕೇಳೂದೇನೈತಿ!

ಮುದುಕಿ— ಏನಿದೂ, ಎಂಥಾ ಅಪರೂಪದ ಮಳೀ ಮಲ್ಲಣ್ಣಾ! ನಿನಗೇನೋ ಒಂತುಸಾ ಕಷ್ಟ ಆದ್ರ್ಯೂ, ಒಟ್ಟಿನವ್ಯಾಗ ಈ ಮಳೀ ಹೊಡೆದದ್ದು ಒಂದು ಚಲೋದೇ ಆತು ಬಿಡು. (ಸೊಸೆಯ ಕಡೆ ತಿರುಗಿ) ಹೋಗವ್ವಾ ಹೋಗು, ನೋಡಿಕೊಂತ ಏನ್ನಿಂತೀದಿ! ಕಾಣವಲ್ಲದs ತಪತಪಾ ತೊಯ್ದಿರೋದು? ಗಡಾನನಾಕು ದಂಟು ಹಾಕಿ ಒಂದ ಹರವಿ ತುಂಬ ನೀರು ಕಾಸು ಹೋಗು....; ಹೋಗಂತೀನಿ (ಅವಳು ಅನುಮಾನಿಸುತ್ತ ಒಳಗೆ ಹೋದಮೇಲೆ ಕಳ್ಳ ದನಿಯಿಂದ) ಅಲ್ಲೋ ಮಲ್ಲಣ್ಣಾ; ಅದ್ರ ಹಿರೇಗೌಡರು ಮತ್ತ ಗೋಕಾವಿ ಗುಂಪು ನದೀ ಆಚೆಗೆ ಉಳಿದರೇನು? ಇನ್ನೇನು ಗತೀ!

ಮಲ್ಲಣ್ಣ— ನೋಡಬೇ ಯುವ್ವಾ; ಗೋಕಾವೀ ಗಿರಣೀ ಸುಟ್ಟಿಗಿಟ್ಟಾರು ಜನರೂ ಅಂತ ಸರಕಾರಕ್ಕ ಎದಿಗುದಿ ಏನಬೇ! ಆದಕ್ಕ ಅತ್ತಾಗ ಕೊಣ್ಣೂರ ಹತ್ತರ ಮಿಲಿಟರಿ ಕ್ಯಾಂಪs ಹಾಕ್ಯಾರು; ಮತ್ತ ಇತ್ತಾಗ ಚಿಕ್ಕನಂದೀ ಸರಕಾರೀ ಬಂಗ್ಲೇದಾಗ ಮಿಲಿಟರಿ ಕುಂದರಿಸಿ ಹಳ್ಳದ ಪೂಲು ಕಾಯಲಿಕ್ಕೆ ಹತ್ಯಾರು. ಅದಕ್ಕ ನಾ ಕೊಳವೀ ಹಾದು, ಹಳ್ಳಾ ಈಸಿಗೋತ ದಾಟಿ, ಕೋಟೂರ ಮ್ಯಾಗಿಂದ ಬಂದೆ ಲೈನು ದಾರಿ ಬಿಟಗೊಟ್ಟು. ಆದರ, ನಮ್ಮ ಹಿರೇಗೌಡರು ಗೋಕಾವಿ ಜನರ ಗುಂಪನ್ನು ಕೂಡಿಕೊಂಡು ಮಾಲದಿನ್ನಿ, ಮಮದಾಪುರದ ಮ್ಯಾಗಿಂದ ಹಿರೇಕೊಪ್ಪದಾಗ ಹಾದು ಚಂದರಗಿ ಮುಂದ ನಮ್ಮ ಜನರನ್ನು ಕೂಡಿಕೊಳ್ಳುವರು. ಒಮ್ಮೆ ಇಂಗ್ರೇಜೀ ಹದ್ದು ದಾಟಿ ಸಂಸ್ಥಾನದ ಹದ್ದಿನೊಳಗೆ ಬಿದ್ದರ ಕೆಲಸ ಆರ್ಧಾ ಆದ ಹಾಗs ಅನ್ನು. ಮತ್ತ ಶಿರಸಂಗೀ ಜನಾ ಒಡಕಹೊಳೀ *ಘಡಿವಿನ್ಯಾಗ ಸಂಜೆಗೆ ವಸ್ತಿ ಮಾಡವರಿದ್ದರೂ; ಅವರ ಸುದ್ದೀ ಬಂದೈತಿಲ್ಲೊ!

* Gorge

**ಮುದುಕಿ**— ಅವರೂ ರಾತ್ರೀ ನಾಕ ತಾಸಿಗೆ ಸೊಗಲಾ ಸೇರಿದರಂತ; ಆದರ ಮಲ್ಲಣ್ಣಾ, ನಿನ್ನ ಮಾತಿನ ಮ್ಯಾಗಿಂದ ನೋಡತಿರಲಿಕ್ಕೆ ಇವೊತ್ತಿನ ಕೆಲಸ ಭಾಳ ಗಡಚಿನ್ದು ಕಾಣತೈತಲ್ಲೋ ಮಲ್ಲಣ್ಣಾ!

**ಮಲ್ಲಣ್ಣ**— ಬರೇ ಗಡಚ್ಯಾಕs, ಅತೀ ನಾಜೋಕೈತಿ ಪ್ರಸಂಗಾ! ಆದರಾಗ ಇವೊತ್ತ ಇನ್ನೊಂದು ದೊಡ್ಡ ಜವಾಬ್ದಾರೀ ಬ್ಯಾರೆ ನೈಮ್ಯಾಲೆ ಬಿದ್ದೈತಿ. (ಹೆಂಡತಿ ಕುಳಿತ ಕಡೆ ಪರೀಕ್ಷಿಸಿ ನೋಡಿ, ಬಹಳ ಜಾಗರೂಕತೆಯಿಂದ) ಅಲ್ಲಬೇ, ಹಿರೇಗೌಡರ ಸಂಗಡ ಇವೊತ್ತ ನಮ್ಮ ದೇಶಭಕ್ತ ದಿನಕರರಾಯರು ಇದ್ದಾರಬೇ!——

**ಮುದುಕಿ**— ಅಯ್ಯ! (ಅರ್ಧ ಹೌಹಾರಿದಂತೆ) ದಿನಕರರಾಯರೂ ಇಲ್ಲಿ ಬಂದಾರು?

**ಮಲ್ಲಣ್ಣ**— ಹೌದಬೇ; ಅಷ್ಟ ಯಾಕ ಜೋರಿಲೆ ಅವರ ಹೆಸರು ತಗೊಂತೀ! ಬೇಕಾದರ ಫೌಂಸ ಮುಹಮ್ಮದಖಾನ ಅನ್ನು.

**ಮುದುಕಿ**— ಅಂತೂ ಮುಸಲರ ಹಾಗ ಆಗಿ ಬಂದಾರ ಅನಬಾರದs!

**ಮಲ್ಲಣ್ಣ**— ಹೌದ ಮತ್ತ! ಆ ಫೌಂಸ ಮುಹಮ್ಮದಖಾನರನ್ನ ಬೆಳಗು ಹರಿಯೂದರಾಗs ಮಲಪ್ರಭಾ ನದೀ ದಾಟಿಸಿ ಆಲೂರ ಸ್ಟೇಶನ್ನಿಗೆ ಮುಟ್ಟಿಸಬೇಕಾಗೈತಿ. ಗೋಕಾವಿ ಸ್ಟೇಶನ್ನದಾಗ ಮಿಲಿಟರಿ ಗದ್ದಲ ಆದದ್ದು ನೋಡಿ, ಪುಣೆ 'ಮೇಲಿ'ಸಿಂದ ಅವರನ್ನ ಕುಡಚೀ ಸ್ಟೇಶನ್ನದಾಗ ಇಳಿಸಿಕೊಂಡು ಮಸೂತೀ ಒಳಗಿಂದ ಅವರ್ನ ಪಾರು ಮಾಡಿ, ನಮ್ಮ ಜನರು ಕೌಜಲಿಗಿಗೆ ಕರಕೊಂಡು ಬಂದರು ಮುದ್ಯಾಣಕ್ಕ. ಬೆಳಗು ಹರಿಯೂದರಾಗs ಅವರನ್ನ ಆಲೂರಿಗೆ ಮುಟ್ಟಿಸಬೇಕು. ನಾಳೆ ಸಂಜಿಗೆ ಅಂಣೀಗೇರಿಯೊಳಗ ದೊಡ್ಡದೊಂದು ಮೀಟಿಂಗು ಐ............(ಹೆಂಡತಿಯು ಮತ್ತೆ ಈಚೆಗೆ ಬರಲು) ಐ, ಐ–ಐ ಐ ಐ ಏನು ಚಳಿಯಿದೂ....ನೀರ ಕಾದಾವs ಇಲ್ಲs?

**ಹೆಂಡತಿ**— (ತನ್ನಷ್ಟಕ್ಕೆ) ಮಳಿ ಹನೀ ಸಿಡಿದು ದಂಟೆಲ್ಲಾ ನಮ್ಮಾಗಿ ಉರಿಯುವೊಲ್ಲವು; ಒಣಾ ಕುಳ್ಳು ಅರs ಒಂದೀಸು ತರತೀನಿ ಕುಳ್ಳಬಾನದಾಗಿಂದ. (ಅವಳು ಹಿತ್ತಲ ಕಡೆಗೆ ಹೋಗುವಳು.)

ಮಲ್ಲಣ್ಣ— (ಹೆಂಡತಿ ಹೋಗುವದನ್ನೇ ನೋಡಿ, ಬಳಿಕ ತಾಯಿಯ ಕಡೆಗೆ ತಿರುಗಿ,) ಅಲ್ಲಬೇ, ಇವತ್ತ ಮಿಲಿಟರೀ ಮೋಟಾರ ಬಂದದ್ವು ಕಲಾದಗಿಯಿಂದ ತಿರುಗಿದ್ವು ಹೌದs!

ಮುದುಕಿ— ಲೋಕಾಪುರದಾಗ ನಮ್ಮ ಜನಾ ತರುಬ್ಯಾರಂತೇಳು!

ಮಲ್ಲಣ್ಣ— ಆದರೂ ನಮ್ಮ ಎಚ್ಚರದಾಗ ನಾವಿರಬೇಕು ನೋಡು! ಅಂತೂ ಆ ಮಿಲಿಟರಿಯವರ ಕೈಯಾಗಿಂದ ನಮ್ಮ ಫೌಂಸ ಮಹಮ್ಮದಖಾನರು ಪಾರಾಗಿ ರಾತ್ರಿ ಸೂರೇಬಾನ ಮುಟ್ಯಾರಂದ ಹಾಂಗ ಆತು ಬಿಡು; ಮತ್ತ, ಯವ್ವಾ, ನೀ ಇಲ್ಲೀ ಕೆಲಸಾ ಎಲ್ಲಾ ಖಚೀತ* ಮಾಡಿದಿ ಹೌದಲ್ಲೊ?

ಮುದುಕಿ— ಆದರ ಚಿಂತೀ ಬಿಡ ನೀ! ಬಾಗಿಲುಕೋಟಿಗೆ ಮತ್ತ ಬೆಳಗಾಂವಿಗೆ ನಾಯಕಲ್ಲ ವಾಲಂಟಿಯರ್ನ ಆಟ್ಟೇನಿ. ಮುಗುಟಖಾನಹುಬ್ಬಳ್ಳಿಯಿಂದ ಪರಭಾರೆ ಮೂರು ಲಾರೀ ಜನರು ಮುನವಳ್ಳೀ ದಾಟಿ ತೊರಗಲ್ಲು ಸೀಮಿಯೊಳಗ ಗೊಡಚಿ ಹಳ್ಳದ ದಂಡೆಗೆ ಮುಟ್ಸೋ ಹಾಗ ಏವಸ್ಥಾ ಆಗ್ಯೈತಿ; ಸಂಜಿಕ ನೀ ಕಳಿಸಿದ ಸಾಮಾನೆಲ್ಲಾ ಮಗದುಂಸಾಬನ ಕಡಿಸಿಂದ ಪಾರು ಮಾಡಿಸಿ ನರಸಾಪೂರ ಅಡವಿಗೆ ಸಾಗಿಸೇನಿ. 'ಸತ್ತೀ' ಊರವರು ಕಳಿಸಿದ ಸಾವಿರ ರೂಪಾಯಿ ಮತ್ತು ಮುಂಬಯಿ ಮಗನ ಶೇಠರ ಚಕ್ಕ್ಯಾ ಹುಬ್ಬಳ್ಳಿಗೆ ಕಳಿಸೇನಿ! ಶಿರಸಂಗಿಯಿಂದ ಬಂದ ಕಾಳೆಲ್ಲಾ ಬಣವೀಯೊಳಗ ಹುಗಿದಿಟ್ಟೇವಿ. ಮತ್ತ ಹೋದ ವಾರದ ೩೮, ಈ ವಾರದ ೪೨, ಒಟ್ಟ ನಾಕಿಪ್ಪತ್ತು ಪೆಟ್ರೋಲ ಡಬ್ಬಿ, ನೀ ಹೇಳಿದ ಲೆಕ್ಕಾಚಾರದ ಪ್ರಕಾರ ಹಗೇದೊಳಗ ಹಾಕಿಟ್ಟೇವಿ. ಮತ್ತ ಆ ದಿನದ ಪತ್ರಾ ಛಾಪಿಸೋ ಮಶಿನ್ನ್ ಎರಡೂ ಇವತ್ತss ಸವದತ್ತಿಗೆ ಕಳಿಸೇನಿ. ಅಂತಾ ಪರಸಂಗ ಬಂದರ ಈ ಗುಡಿಸಲಾ ಸುಟ್ಟಬಿಡೋ ತಯಾರೀ ಇಟ್ಟೇನಿ. ಮತ್ತ ಇವೊತ್ತಿನ ಮುಖ್ಯ ಕೆಲಸದ ಜವಾಬ್ದಾರಿ ನಿನ್ನ ಮ್ಯಾಗ ಮತ್ತು ಹಿರೇಗೌಡರ ಮ್ಯಾಗ ಐತಿ! ನರಸಾಪುರದ ಅಡವ್ಯಾಗ ಅವರದೂ ಗಲಗಲಿ ಆಚಾರದೂ ಗೊತ್ತ್

* ನಿಶ್ಚಿತ

ಮಾಡಿಧಾಂಗ ಗಂಟುಬಿದ್ದು ಅವರೆಲ್ಲಾ ಇಷ್ಟೊತ್ತಿಗೆ ಮುರಗೋಡಕ್ಕ ಮುಟ್ಟಿದ್ದರು ಅಂದರ, ಇನ್ನೊಂದು ಅರ್ಧಾ ತಾಸಿನೊಳಗ ಆಲದಕಟ್ಟೀ ಮುರಡೀ ಮ್ಯಾಗ ಉರೀ ಏಳತೈತಿ. ಅಂದ್ರ ನೀ ಕಡಕೋಳ ಕಡೆ ಹೋಗೋ ಕಾರಣ ಇಲ್ಲಾ; ಮತ್ತ ಹೊತ್ತಿಗೆ ಉರಿ ಏಳಲಿಲ್ಲಾ ಅಂದ್ರ ಮಾತ್ರ, ನೀ ಇಲ್ಲಿಂದ ಕಡಕೋಳಕ್ಕ ಹೋಗಬೇಕಾಗತೈತಿ. ಮಾತ್ರ ಒತ್ತರ ಮಾಡೂ ತೀರಿತು. ಅತ್ತಾಗ ದಿನಕರರಾಯರಂಥ ಧೊಡ್ಡ ಮನಷ್ಯರ ಜೀವಾ ಬಚಾವಾಗ* ಬೇಕು; ಇತ್ತಾಗ ನಾವು ಹಾಕಿದ ಹಂಚಿಕೀನು ಬೆಳಗು ಹರಿಯೂದರಾಗs ಹೊಂದುಗೂಡಿ ನಮ್ಮ ನಮ್ಮ ಜನಾ ತಂತಮ್ಮ ಗೂಡು ಸೇರಿಕೋಬೇಕು. ಸುಲಧಾಳ ಸ್ಟೇಶನ್ನ ಮಾಸ್ತರಾ ಪೂರಾ ನಮ್ಮ ಕೈಯ್ಯಾಗ ಸಿಕ್ಕಾನಂತ!

ಮಲ್ಲಣ್ಣ— ಸರಿ ಬಿಡು ಹಾಂಗಾರ! ಇನ್ನ್ಯಾಕೀ ಗೊಂಗಡೀ ಮುಸುಕು! ಕೆಲಸ ಭಾಳೈತಿ; ವ್ಯಾಳ್ಯಾ ತುಸಾ ಐತಿ. ನೀ [illegible]ತೂ ಎಲ್ಲಾ ನಾ ಹೇಳಿಧಾಂಗ ಮಾಡೀದಿ; ಮತ್ತ ನಮ್ಮ ಹುಡುಗರು ಯಾರೂ ಅಸಿಮಿಸಿ ಮಾಡವ್ರಲ್ಲಾ! ಮತ್ತ ಸ್ವತಾ ಮಗದುಂಸಾಬನೇ ನರಸಾಪುರದ ಕಡೆ ಹೋದ ಮೇಲೆ ಅಲ್ಲೀ ಕೆಲಸಾನೂ ಹಸಿಬಿಸಿ ಆಗೋಹಾಗಿಲ್ಲಾ! ಆತು. ನಾ ಅಟು ಮೈ ತೊಳಕೊಳ್ಳೋ ಶಾಸ್ತ್ರ ಮಾಡಿ ಬರ್ತೀನಿ; ನೀ ಆಲದಕಟ್ಟೀ ಮುರಡೀ ಮ್ಯಾಗ ಉರಿ ಎದ್ದ್ರ ನನಗ ಸೊನ್ನೀ ಮಾಡು. ಆಂ! (ಆತ ಮೇಲೆದ್ದು ಹೆಂಡತಿಯು ಚಟುವಟಿಕೆಗಳನ್ನು ನಿರೀಕ್ಷಿಸುತ್ತಿರುವನು.)

ಮುದುಕಿ— ಮಲ್ಲಣ್ಣಾ, ಇತ್ತಾಗ ಬಾ ಅಟು! (ಆತ ಹತ್ತಿರ ಬರಲು) ಇಕಾ ನೀ ಹೇಳಿದ ಹಾಗ ಅರವತ್ತು ಮಂದೀ ರೊಟ್ಟೀ ಬಡದು ಬಣವೀಯೊಳಗ ಮುಚ್ಚಿ ಇಟ್ಟೀನಿ; ನಿನ್ನ ಹೆಂಡತಿಗೆ ಹೇಳು! ತಂದು ಕೊಡತಾಳ!

ಮಲ್ಲಣ್ಣ— ಆಕೀಗೆ–ಮತ್ತೂ–ಏನೇನು ಗೊತ್ತಾಗೈತಿ? ಸಂಣಾಕಿ ಆಕಿ;

* ರಕ್ಷಣೆ

ನೋಡ ಮತ್ತ, ಬಾಯಿ ಸುಂದರಾಕಿಲ್ಲಾ! ಬಲು ಹೆಣ್ಗರುಳಿನ ಹುಡುಗಿ ಆಕಿ!

**ಮುದುಕಿ** — ಆಕಿಗೇನು ಹೆಚ್ಚಿಗೆ ಗೊತ್ತಿಲ್ಲ ಬಿಡು. ಎಷ್ಟು ಗೊತ್ತಿರಬೇಕು ಅಷ್ಟ ಗೊತ್ತೈತಿ. ಹೆಚ್ಚಿನ ಪಂಚೇತಿ* ಆಕಿ ಮಾಡೋಹಾಗ ನಾ ಇಟ್ಟೇ ಇಲ್ಲ. ಈ ನರಸಮ್ಮಾ ಎಲ್ಲಾರನೂ ನುಂಸಮ್ಮ! ತಿಳೀತಿಲ್ಲೋ! ಆದರೂ ಈ ಹರೇದ ಹುಡುಗೆಯರ ಮನಸ್ಸ ಹೀಗs ಅಂತ ಹೇಳಾಕ ಬರೂದಿಲ್ಲ ಬಿಡು. ನನಗೆಲ್ಲಾ ಪೂರಾ ಅನುಭಾವ ಐತಿ; ಮತ್ತ ನೀ ಆಕೀ ಎದುರಿಗೆ ಅದು ಇದೂ ಅನsಬ್ಯಾಡಾ! ಸುಮ್ಮಕ ಎರಡು ಮಾತು ರಮಿಸಿ ಹೋಗು. ಇವತ್ತಿನ ರಾತ್ರಿ ನಿನ್ನದಸಿಂದ ಆಕಿ ಮೀಸಲಾಗಿಟ್ಟಿದ್ದಳು.— ಆದರ ಅದಕೇನು ಉಪಾಯ ಇಲ್ಲ ಬಿಡು.

**ಮಲ್ಲಣ್ಣ**— ಆತು ಬಿಡು; ನಾನೂ ಅವರ ತವರುಮನೀನs ಎರಡು ಚಲೋ ಮಾತಾಡಿ ಬಿಡತೀನಿ. ಹೋಗ, ಶಂಗಾರ ನೀ; ಹಿತ್ತಲ ಕಟ್ಟೀ ಮ್ಯಾಲ ಕುಂತಿರು, ಮುರಡೀ ಕಡೆ ಕಂಣು ಹಚ್ಚಿ. ಆದರ ಮತ್ತ ಕುಂತಲ್ಲೇ ಕಣ್ಣಿಗೆ ಕಣ್ಣು ಹಚ್ಚೀ!

**ಮುದುಕಿ**— (ಹೋಗುತ್ತಿರುವವಳು ಹಿಂದಿರುಗಿ) ಏಳೋ ನಿನ! ಯಾತರ ಮಾತಾಡ್ತೀ! ಅಲ್ಲಾ ಉಪ್ಪಿನ ಸತ್ಯಾಗ್ರಹಾ ಒಂದು ಬಿಟ್ರ ನಾ ಮಾಡದೆ ಇದ್ದ ಕೆಲಸಾನೇ ಇಲ್ಲ ಮಲ್ಲಣ್ಣಾ! ಕಣ್ಣಾಗ ಎಂಣೀ ಹಾಕ್ಕೊಂಡ ಕೂಡದs ಅಷ್ಟ ಕೆಲಸಾ ಮಾಡಿದ್ದೇನs ನಾ!

(ಮಲ್ಲಣ್ಣನು ಹಸನ್ಮುಖನಾಗುತ್ತ ಒಳಗೆ ಹೋಗಲು, ಮುದುಕಿಯೂ ಮನದಲ್ಲೇ ಸಂತಸಬಡುತ್ತ ಹಿತ್ತಲ ಕಡೆಗೆ ಹೋಗುವಳು. ಹೋಗಹೋಗುತ್ತ ಹಾಗೆಯೇ ಕಂದೀಲು ಸಣ್ಣದು ಮಾಡುವಳು. ಸ್ವಲ್ಪ ಹೊತ್ತಿನಲ್ಲೇ ಮಲ್ಲಣ್ಣ ಆಚೆಗೆ ಹೋಗಿ ಜಳಕ ಮಾಡಿ ಒರಿಸಿಕೊಳ್ಳುತ್ತಾ ಬರುತ್ತಿರುವಷ್ಟರಲ್ಲಿ, ಆತನ ಹೆಂಡತಿ ಆತನಿಗಾಗಿ ಗಂಗಾಳ ಬಡಿಸುತ್ತಿರುವಳು. ಆತ ಉಣ್ಣಾಕೂಡಲು, ತಾನೂ ಬದಿಯಲ್ಲೇ ಕೂಡುವಳು.)

**ಹೆಂಡತಿ**— ಇವತ್ತು ಬಲು ದಣಕೊಂಡು ಬಂಧಾಗ ಕಾಣತೈತಿ; ಒಂದ

* ಅಧಿಕಪ್ರಸಂಗ

ರಾತ್ರೆರ ಆಟು ಅರಾಮು ಮಾಡಿಕೊಳ್ರಿ ಅಂತೀನಿ. ಮತ್ತ ನಮ್ಮಣ್ಣಾ ಕರೆಯಾಕ ಬಂದ್ರ ನಾಳೆ ನಾಡದು ನಾನೂ ಹೋಗೋ ಆಕಿ! ನೀವೇನು ಕೆರೂರ ಕಡೆ ಹೋಗಿದ್ರೋ ಇಲ್ಲೋ!

**ಮಲ್ಲಣ್ಣ—** ಅಲ್ಲಽ, ಮತ್ತ ಯಾತಕಿಷ್ಟು ನನಗ ತಡಾ ಆದದ್ದು? ಮುದ ಕವಿ ಕೆಲಸಾನೂ ಆತು; ಬಾದಾಮಿಗೆ ಹೋಗಿದ್ದೆ, ಐನೂರು ರೂಪಾಯಿ ಸಾಲಾ ತಗಿಯಾಕ; ಅದೂ ಆತು. ಕೆರೂರಿನಾಗಂತೂ ಎಲ್ಲಾರು ನಿನ್ನ ದಾರೀ ನೋಡಾಕ ಹತ್ಯಾರು; ಮತ್ತ ಈ ನಕ್ಷತ್ರ ತಿರುಗಿತಂದ್ರ ಎಂಕಪ್ಪನವರಽ ನಿನ್ನ ಕರಿಯಾಕ ಬರತಾರು, ನಾ ಹೊಸದಾಗಿ ತೊಗೊಂಡ ಹೋರೀ ಹೂಡಕೊಂಡು!

**ಹೆಂಡತಿ—** ಅಪ್ಪಾ ತಾನಽ ಬರ್ತೀನಂದಾ! ಅದ್ಯಾಕ ಚಕ್ಕಡಿ ಹೂಡಿಕೊಂಡು ಬರ್ತಾನೂ? ಬಸ್ಸಿನ ವ್ಯಾಗ ಹೋಗಿದ್ರ ಬರ್ತಿತ್ತಲ್ಲಾ. (ಪಲ್ಯ ನೀಡುವಳು)

**ಮಲ್ಲಣ್ಣ—** ಅಲ್ಲಽ, ಓಬಲಾಪುರದಾಗಿನ ನಿಮ್ಮಕ್ಕ ದೀಪಾವಳೀಗೆ ಹೋಗಿದ್ದಿಲ್ಲಾ ಕೆರೂರಿಗೆ; ಆಕಿನ್ನ ಓಬಲಾಪುರಕ್ಕೆ ಕಳಿಸಿ, ಹೋಗೂವಾಗ ನಿನ್ನ ಕರಕೊಂಡು ಹೋಗ್ತಾರು; ಮತ್ತ ನಿನಗೂ ಅಕ್ಕನ ಮುಕಾ ಸಿಗತೈತಲ್ಲ ನೋಡಾಕ ಅನಾಯಾಸ. (ಅವಳು ಕನಸಿನ ಅವ್ಯಕ್ತ ಆನಂದವನ್ನು ಅನುಭವಿಸುವಂತಿರುವಳು. ಅದನ್ನು ಗಮನಿಸಿ) ............... ಆದರೇನು, ಇದಽ ಸಾರೆ, ನಮ್ಮ ಹೋರಿ, ನಮ್ಮ ಹಣಾ, ನಾ ಹಿಡಿದ ಹೊಲಾ, ವ್ಯಾಲಿಂತಾ ಹಿಂಗಾರಿ ಮಳಿ! ಅಂದಮ್ಯಾಗ ಕೇಳಯೇನು, ಪುರಮಾಸಿ * ಬೆಳೀ ಬರತೈತಿ ನೋಡು! ಇನ್ನೇನು ಆಯ್ತಾ ಸುಗ್ಗಿ ಹೊತ್ತಿಗೆ ನೀ ಬಾಣಂತಿ ಆಗೋವಾಕಿ! ನಮ್ಮ ಸುಗ್ಗಿಗೆ ಪೂರಾ ಹದಾ ಬರಾಕಿಲ್ಲ ಬಿಡು ನೀ ಇಲ್ಲದ! (ನೀರು ಕುಡಿಯುತ್ತಿರುವನು.)

**ಹೆಂಡತಿ—** (ನಸುನಗುತ್ತ, ಕನಸಿನ ಕದದಾಚೆಯಿಂದಲೇ) ಮತ್ತ ಮುತ್ತಿನಂಥಾ ಗಂಡಸುಮುಗಾ ಆದ್ರ, ನಿಮಗೇನು, ಕುಂತಲ್ಲೆ ಎರಡು ಸುಗ್ಗೀ ಬೆಳೀ ಬಳಕೊಂಡಂಗ ಆದೀತೇಳ್ರಿ! (ರೊಟ್ಟಿ ನೀಡುವಳು.)

---

* ಒಳ್ಳೇ ಭರದಿಂದ

ಮಲ್ಲಣ್ಣ— (ತಾನೂ ಮತ್ತೊಂದು ಬಗೆಯ ಕನಸಿನ ವ್ಯಾಮೋಹದಿಂದ) ಮಾದೇವ ಕೊಟ್ಟರ, ಈ ಸಾರೆ ಮೂರು ಸುಗ್ಗೀ ಬೆಳೀ ಬರಬೇಕು. ಇವೆರ ಡರಕಿಂತ ಹೆಚ್ಚಿನ ಸುಗ್ಗಿ ಇನ್ನೊಂದೈತಿ.

ಹೆಂಡತಿ— (ಕುತೂಹಲದಿಂದ) ಏನದೂ !

ಮಲ್ಲಣ್ಣ— (ಚೇತರಿಸಿಕೊಂಡು) ಮತ್ತೇನು....! ಮತ್ತೇನಿಲ್ಲ ಬಿಡು; ಮಾದೇ ವನ ದಯಾ! ಅದಕ್ಕಿಂತ ಹೆಚ್ಚಿಂದ್ಯಾವದೈತಿ! ಅಲ್ಲs, ಮಾತ ಮಾತಿನ್ಯಾಗ ಮತ್ತ ಅರ್ಧಾ ರೊಟ್ಟಿ ಹೆಚ್ಚಿಗಿ ನೀಡೀದೆಲ್ಲ! ಈಗs ಹೊಟ್ಟಿ ತುಂಬೈತಿ; ಇನ್ನೂ ನಾಕು ಹರದಾರಿ ನಡೀಯೂದೈತಿ.

ಹೆಂಡತಿ— (ನಿರಾಸೆಯ ಉದ್ರೇಕದಿಂದ) ಅಯ್ಯ ನನ್ನ ಮಾದೇವನ ದಯಾನs! ನಾ ಖರೇವಂದ್ರ ಇವೊತ್ತು ಮಾದೇವನ ದಯಾ ಆತು ಅಂತ ಮಾಡಿದ್ದೆ. ಅಂತಾ ನಸೀಬಾ * ನನಗೆಲ್ಲಿ ಐತಿ........(ಸ್ವಲ್ಪ ಸ್ಥಿರತೆ ಯಿಂದ) ಮತ್ತೀಗ ಹೋಕ್ಕೀರೇನು !

ಮಲ್ಲಣ್ಣ— (ನಿಶ್ಚಯದ ದನಿಯಲ್ಲಿ) ನನಗ್ಮತ್ತೇನೈತಿ ದಗದಾ! ‡ ದೇವರು ನನ್ನ ಹಣಿಯೊಳಗ ಸುಖಾ ಬರೀಲಿಲ್ಲಾ. ತ್ರೈಕಾಲಾಗ ಪುರ ಸೊತ್ತು § ಹಾಕಿಡಲಿಲ್ಲಾ! ಆಪರ, ಕೇಳs ಇಲ್ಲಿ; ಮತ್ತ ನಾಳೆ ಮಧ್ಯಾಣಮ್ಯಾಗ ತಪ್ಪದ ಬರ್ತೀನಿ! ಹೋದ ವಾರಧಾಂಗ ಮತ್ತೊಂದೂ ಮಾಡಾಣೆಲ್ಲಾ ಬಿಡಬಾರದs! ಇರ್ಲಿ ಬಿಡು, ಆಷ್ಟ್ಯಾಕ ಹಚ್ಚಿಕೊಳ್ಳತೀ!

ಹೆಂಡತಿ—(ಕಣ್ಣೀರು ಮಿಡಿಯುತ್ತ) ಅದಕ್ಕಲ್ರೀ, ಈ ರಾತ್ರಿ ಹೊತ್ತಿನಾಗ ನೀವ್ಹೀಂಗ ಹೊರಹೊರಗ ಇರೂದಂದ್ರ ನನಗ ಜೀವದಾಗ ಜೀವ ಇರೂದುಲ್ರಿ! ಆದರಾಗ ಇವೊತ್ತ ಬ್ಯಾರೆ, ಸುತ್ತೂ ಕಡೆ ಮಿಲಿಟರಿ ಪೋಟಾರು ತುಂಬಿ ತುಂಬಿ ಹೋಗ್ಯಾವ್ರಿ! ಇಂಥಾದ್ರಾಗ ನೀವೂ ಜನರಿಗೆ ಸರಕಾರದ ವಿರುದ್ಧ ಸಹಾಯ ಮಾಡಾಕ ಹತ್ತೀರಿ; ಇಲ್ಲದಿದ್ದರ ಇವತ್ತ ಅಷ್ಟು ರೊಟ್ಟೀ-ಬಡದಿಡೋದೇನು ಕಾರಣಿತ್ತು! ಅವನ್ನ ಒಯ್ಯೋ ಪೂರ್ತೆ ನೀವು ಬಂದೀರಿ ಕಾಣಿಸ್ತೈತಿ. ನಿಮ್ಮ

* ದೈವ; ‡ ಕೆಲಸ; § ಬಿಡುವು.

ದಸಿಂದ ಬ್ಯಾರೇ ಜೀವ ಕತಕತಾ ಅಂತಾವ ಅನ್ನೋದರ ಅರವು ನಿಮಗೇನು ಬಿಡ್ರಿ!

**ಮಲ್ಲಣ್ಣ**—(ಅರೆನಂಬಿಕೆಯ ದನಿಯಲ್ಲಿ) ಅದೇನು ಅಂಥಾ ಮಾತಲ್ಲ ಬಿಡು! ಊರ ಜನರದೂ ಒಂದೀಟು ಕೆಲ್ಸಾ ಮಾಡಾಕಬೇಕು; ಅದರಾಗ ಬ್ಯಾರೆ, ಬಡವನ ಹೆಂಡತಿ ಎಲ್ಲಾರ ಸೊಸೆ ಅನ್ನೂ ಹಾಗ ನನ್ನಂಥ ವರ ಗತಿ! ನಾಕ್ಮಂದೀ ಮರ್ಜಿ ಹಿಡಿಯಾಕs ಬೇಕು! ಬಡವರ ಹಣೇಬರಹ ಅದು!

**ಹೆಂಡತಿ**— ಸುತ್ತು ಕಡೆ ಇಷ್ಟು ಹೆದರಿಕೆ ಇರುವಾಗ ನೀವಿಂಥಾ ರಾತ್ರಿಯೊಳಗ ಬಂದಿರಾದ್ರೂ ಹ್ಯಾಂಗ ಅನಸ್ತೈತಿ!

**ಮಲ್ಲಣ್ಣ**— ಬಂದದ್ದು ನಿನ್ನ ತಾಳೀ ಪುಣ್ಯಾನ ಅನ್ನು! ಹತ್ತ ಕಡೆ ಪಾರಾಗಿ ಕೋಟೂರ ದಾಟಿ ರಸ್ತೇಕ ಬ...........

**ಹೆಂಡತಿ**— ಕೋಟೂರೂ—!....!

**ಮಲ್ಲಣ್ಣ**— (ಎಚ್ಚತ್ತು) ಅಲ್ಲಲ್ಲ........ಅದ್ಯಾವದದೂ........ಹಂ— ಕೆಸರಗೊಪ್ಪ........ಅಲ್ಲೆ ನೋಡು—ಕೊರಕೊಪ್ಪದ ಹಳ್ಳದ ಪೂಲಿನ ಕಟ್ಟೀಮ್ಯಾಗ—ಸೂಳೀಮಗಾ—ಒಬ್ಬ ಪೋಲೀಸಾ ಹೊಡೀತಿದ್ದಾ ....ಗೊರಕೀ!

**ಹೆಂಡತಿ**— (ಬಲು ಗಾಬರಿಯಿಂದ) ಅಯ್ಯ ನನ ಶಿವನ....ಪೋಲೀಸಾ!

**ಮಲ್ಲಣ್ಣ**— ಹೂಂ! ಬಂದೂಕ ಎದಿಗಾನಿಸಿಕೊಂಡs ಮಲಗಿದ್ದ ನೋಡು!

**ಹೆಂಡತಿ**— ಬಂದೂಕs! ಮತ್ತ ಹಾರಿಗೀರಿತೋನ್ನಿ!

**ಮಲ್ಲಣ್ಣ**— (ಕೆಣಕುವ ದನಿಯಲ್ಲಿ) ಹಾರದ ಬಿಟ್ಟೀತು! ಎದೀಗುಂಡಿಗೇ ಬಡೀತು ನೋಡು ಗುಂಡು!

**ಹೆಂಡತಿ**— (ತೀರಾ ಹೌಹಾರಿ ಆತನನ್ನು ಅವಚಿಗೊಳ್ಳಲು ಸಾಗರ ಬೀಳುವವಳಂತೆ)— ಅಯ್ಯ ಮತ್ತ ನೀವಿಲ್ಲೀತನಕ ಬಂದಿರಿ ಹ್ಯಾಗ! ಎದಿಗೆ ಬಡಿತೋ?

**ಮಲ್ಲಣ್ಣ**— (ಅವಳನ್ನು ಕೊಡವಿ) ಛೀ ಹುಚ್ಚಿ! ಆ ಪೋಲೀಸನೆದೆಗೆ! ಪಾಪ! ಆವಗ ಮುಕ್ಕೊಳ್ಳಲಾಕ ಪೂಲಿನ ಕಟ್ಟೆ ಸುಕಾ ಆಗಾಕಿಲ್ಲ ಅಂತ ಕಡೆತನಕ ನಿದ್ದಿ ಮಾಡಾಕ ಅವನ್ನ ಕಳಿಸಿಕೊಟ್ಟೆ ಕೈಲಾಸಕ. **(ಅವಳಿಗೆ ಮಾತಿನ ಅರ್ಥವಾಗಲು, ಗಾಬರಿಯಿಂದ ಕಣ್ಮುಚ್ಚಿಕೊಳ್ಳುವಳು. ಅಷ್ಟರಲ್ಲಿ ಮುದುಕಿ ಕಳ್ಳಹೆಜ್ಜೆಯಿಂದ ಓಡಿಬಂದು ಮಲ್ಲಣ್ಣನ ಭುಜ ತಟ್ಟುವಳು.)**

ಮುದುಕಿ— ಉರಿ ಎದ್ದೈತಿ ಮಲ್ಲಣ್ಣಾ ! ಗಡಾ ಮಾಡು ಗಡಾ !....... ಈಗೊಂದು ಅರ್ಧಾ ತಾಸಿನಿಂದ ಮಳೀನು ಹೊರಪೈತಿ. ನೀ ಇಲ್ಲಿಂದ ಪಾರಾದೀ ಅಂದ್ರ ಇವತ್ತಿನ ಕೆಲಸ ಆಧಾಂಗs ಅನ್ನು. ಏಳಿನ್ನು! (ಸೊಸೆಗೆ) ಏಳವ್ವಾ ಏಳು, ಆದೇನು ಹಾಗ ನೆಲದಾಗ ಮುಖ ಇಟಗೊಂಡು ಕುಂತ್ರ ? ಗಡಾನ ಬಣವಿಗೆ ಹೋಗಿ ಆ ರೊಟ್ಟೀ ಗಂಟು ತಗದುಕೊಡು ಹೋಗು; ಎಲಾ, ಹೋಗs, ಬ್ಯಾಗ ತತಾ ! (ಸೊಸೆ ಮೆಲ್ಲನೆದ್ದು ಹಿಂಬದಿಗೆ ಹೋಗುವಳು.) ನಾವಿಷ್ಟೋತ್ತು ವ್ಯಾಳ್ಯಾ ಕಳದದ್ದ ತಪ್ಪು ಮಲ್ಲಣ್ಣಾ; ಇಕಾ ಒಂದ ತಾಸಿನ್ಯಾಗ ನೀವೆಲ್ಲಾರೂ ಕೂಡಿಕೊಂಡು ನ್ಯಾಸರಿಗಿ ದಾಟಿದಿರಿ ಅಂದರ ಕಾರ್ಯ ಪಾರಾದ ಹಾಗ ಅನ್ನಲಾಕ ಅಡ್ಡಿಯಿಲ್ಲ.

ಮಲ್ಲಣ್ಣ— (ಕೈತೊಳೆದೆದ್ದು) ಆದ್ರ ಯವ್ವಾ! ಈಕಿನ್ನ ನೀ ಕಾಯಕೋ ಇವತ್ತಿನ ರಾತ್ರಿ. ತಾಯಿ ಸತ್ತು ದಿಕ್ಕೇಡಿ ಆದ ಈ ಹುಡಿಗಿ ನನ್ನs ಹಚಿಗೊಂಡ ನನ್ನ ಮ್ಯಾಗs ಜೀವಾ ಇಟಗೊಂಡು ಕುಂತಾಳ. ಹಾಂಗ ನೋಡಿದ್ರ ಯಾತರವ್ಯಾಗೂ ಬಾಳ ಜೀವಾ ಇಟ್ಟುಕೊಂಡಿರೋದು ಒಂದು ರೀತಿಯಿಂದ ತಪ್ಪs ನೋಡು. ದೇಶದ ಮ್ಯಾಲ ಮಾತ್ರ ಒಂದಿರಬೇಕು. ಆತು, ನಾ ಹೋಕ್ಕೀನಿ ಇನ್ನ; ಇವತ್ತಿನ ಕೆಲಸಕ್ಕೆ ನಿನ್ನ ಹರಕೀ ಕೊಟ್ಟು ಕಳಿಸು ತಾಯಿ!

ಮುದುಕಿ— ಹರಕೀ ಹರಕತ್ತೀನಾಗ್ಯೆ .......

(ಅರೆಮಾತಿನಲ್ಲೆ ಮುಂಬದಿಯ ಬಾಗಿಲ ಧಡಧಡ ಸಪ್ಪಳಾಗುವದು! ಇಬ್ಬರೂ ಪೂರಾ ಗಾಬರಿಯಾಗುವರು. ಮುದುಕಿಯೇ ಎತ್ತರವನ್ನು ತಡಕೊಂಡು ಬಾಗಿಲ ಬಳಿ ಕಿವಿಯಿಟ್ಟು ಕೇಳುವಳು. ಅಷ್ಟರಲ್ಲಿ ಮತ್ತಿಷ್ಟು ಹೆಚ್ಚಿಗೆ ಬಾಗಿಲು ಬಡೆಯುವದಲ್ಲದೆ, ಹೊರಗಿನಿಂದ ಗೊಗ್ಗರ ದನಿಯೊಂದು ಕೇಳುವದು.)

ದನಿ — ಯಾರಿದ್ದೀರಿ ಒಳಗ! ತಗೀರಿ ಬಾಗಲಾ! ಸರಕಾರೀ ಹುಕುಂ ಆದs; ಬಾಗಲಾ ತಗೀತೀರೋ, ಏನು ಮುರಿಯೋಣೋ! ಹೂಂ ತಗೀರಿ—ಏ ಮುದುಕೀ! ಜೀವ ಬೇಕೋ ಬ್ಯಾಡೋ! ಸುತ್ತೆಲ್ಲಾ "ಪಹಾರೆ"* ಆದs! ತಗೀರಿ ಸುಮ್ಮನೆ! (ಮುದುಕಿ ಒಂದು ನಿಮಿಷ

* ಕಾವಲು

ಬಾಗಿಲು ನುಗ್ಗಿಕೊಂಡು ನಿಲ್ಲುವಳು; ಮಲ್ಲಣ್ಣ ಅತ್ತಿತ್ತ ಬಿದ್ದ ತನ್ನ ಸಾಮಾನು ಎತ್ತಿಕೊಂಡು ಓಡಲು ಸಿದ್ಧನಾಗುವನು; ಮುದುಕಿ ಅವನ ಹತ್ತಿರ ಹೋಗಿ ಹೇಳುವಳು.)

**ಮುದುಕಿ**— ಓಡ; ಓಡ ಗಡಾನೆ; ಬಣವೀಪ್ಯಾಗ ಹತ್ತಿ ಕುಂತಕೋ; ನಿಚ್ಚಣಕೀ ಮ್ಯಾಲ ಎಳಕೊಂಡು ಅಲ್ಲೇ ಕುಂತಿರು, ನಾ ಸೊನ್ನೀ ಮಾಡೂತನಕಾ! (......ಆತ ಕಳವಿನಿಂದ ಓಡಿ ಹೋಗುವನು; ಹೋಗುವಾಗ ನೀರಿನ ಚರಗಿ ಉರುಳುವದು. ಮುದುಕಿ ಕಂದೀಲು ಇನ್ನೂ ಚಿಕ್ಕದು ಮಾಡುವಳು. ಮತ್ತೆ ನಿದ್ದೆಯಿಂದ ಎದ್ದವರಂತೆ ನಟಿಸುತ್ತ ಆರೆಸಿಟ್ಟಿನ ದನಿಯಲ್ಲಿ ಕೂಗಾಡುವಳು.) ಯಾರೋ ಅವಾ ಬೇಖರಸೀ.

**ಮತ್ತೊಂದು ದನಿ**— ಏ ಮುದುಕೀ ಗಡಾ ಬಾಗಲಾ ತಗೀ! ಸಾಹೇಬರು ಬಂದಾರು.

**ಮುದುಕಿ**— (ಹಿತ್ತಲ ಕಡೆಗೆ ಒಂದು ಸಲ ನಿರೀಕ್ಷಿಸಿ, ದೊಡ್ಡ ದನಿಯಲ್ಲಿ) ಏನು ಮೂಳಗಳು ಇವು; 'ಚಾ'ದ ಅಂಗಡಿ ಆದಾಕ್ಷಣಕ್ಕ ಸರಿ ರಾತ್ರಿಯೊಳಗೂ ಸುಮ್ಮಕ ಬಿಡಬಾರದೂ? (ಮತ್ತೊಮ್ಮೆ ಹಿಂದೆ ನೋಡಿ ಮಾಲಿಸಿ, ಬಾಗಿಲು ತೆಗೆಯುವಳು; ಸಂಜೆಗೆ ಬಂದ ಪೋಲೀಸರಲ್ಲೊಬ್ಬ ಹಾಗೂ ಇನ್ನೊಬ್ಬ ಯುನಿಫಾರ್ಮು ಇಲ್ಲದ ಸಿ. ಆಯ್. ಡಿ. ಪೋಲೀಸ ಇಬ್ಬರೂ ಒಳಗೆ ಬರುವರು.) ಅಲ್ಲರೋ ಇಷ್ಟ್ಯಾಕ್ರೋ 'ಚಾ'ದ ತಲುಬೂ‡ ನಿಮಗ? ಹಗಲು ಹನ್ನೆರಡು ತಾಸು, ಇರಳು ಇಪ್ಪತ್ತುನಾಲ್ಕು ತಾಸು ನಿಮ್ಮದಸಿಂದ 'ಚಾ' ಕುದಿಸಿಕೋತ ಕುಂದರಂತೀರೋ ಏನು!

**ಸಿ. ಆಯ್. ಡಿ.**— ಸುಮ್ಮನಿರಬೇ ಮುದಕೀ; ಬಾಯ್ಮಾಡಬ್ಯಾಡಾ! ನಾವೇನು ನಿನ್ನ 'ಚಾ'ದಶಿಂದ ಬಂದಿಲ್ಲಾ; "ಸುಪ್ರಿಟೆಂಡ್" ಸಾಹೇಬರು ಬಂದಾರ; ಸರಿ ಅತ್ತ (ಅಷ್ಟರಲ್ಲಿ ಕೈಯಲ್ಲಿ "ಹಂಟರ್" ಹಿಡಿದ ಸುಪರಿಂಟೆಂಡೆಂಟ್ ಸಾಹೇಬರೂ, ರಾಘುಪ್ಪಗೌಡರೂ ಒಬ್ಬರ ಹಿಂದೊಬ್ಬರು ಬರುವರು. ಅವರ ಹಿಂದೆ ಇಬ್ಬರು ಸಶಸ್ತ್ರರಾದ ಮಿಲಿಟರಿ ಸೋಲ್ಜರರು. ಅವರನ್ನೆಲ್ಲ ನೋಡಿ ಮುದುಕಿ ಆಶ್ಚರ್ಯ, ಗಾಬರಿ, ಸಿಟ್ಟುಗಳೊಂದಿಗೆ ಹಿಂದೆ ಹಿಂದೆ ಸರಿಯುವಳು. ಗೌಡರು ವಿಚಾರಮಗ್ನರು. ಉಳಿದವರು ಕುತೂಹಲದಿಂದ ಗುಡಿಸಲನ್ನು ಪರೀಕ್ಷಿಸುವರು. "ಸುಪರಿಟೆಂಡ್" ಸಾಹೇಬರು ಒಳಗೆ ಬಂದು

‡ ಚಟ, ವ್ಯಸನ

ಒಮ್ಮೆ ಸುತ್ತೂ ನೋಡಿ ಹಿಂದೆ ಬಂದ ಬಾಗಿಲುಕಡೆ ನೋಡಿ, ತೆರೆಯಾಚೆಗಿದ್ದ ಫೌಜದಾರರಿಗೆ ಕೂಗಿ ಹೇಳುವರು.)

ಸುಪ್ರಿ— ಫೋಜದಾರ ಸಾಹೇಬ್, ನೀವು ಉಳಿದ ಎಲ್ಲಾ ಸಿಪಾಯರನ್ನೂ ಗುಡಿಸಲು ಸುತ್ತುಮುತ್ತೂ ಬಳ್ಳೀಕಟ್ಟಿ ನಿಲ್ಲಲಿಕ್ಕೆ ಹುಕುಂ ಕೊಡಿರಿ. ಹಿಂದಿನ ಜೋಳದ ನಿಲುವಿನಲ್ಲಿ ಯಾರೂ ಪಾರಾಗದಂತೆ ಮೊದಲು ನೋಡಿರಿ. ಆಂ! (ಹಿಂದಿರುಗಿ ಕೈಯಲ್ಲಿಯ "ಹಂಟರ"ನ್ನು ಅಲ್ಲಿದ್ದ ಮೇಜಿನ ಮೇಲೆ ಒಗೆದು, ಮುದುಕಿಯನ್ನು ನೋಡಿ) ಏ ಮುದುಕೀ, ನೀ ಬಲು ಚಾಣಾಕ್ಷ ಕಾಣತೀಯಲ್ಲs! ಹಕ್ಕೀ ಹಾರಿಸಿಬಿಟ್ಟೀ ಹೌದs! (ಅತ್ತಿತ್ತ ನೋಡಿ ಸುಳುವು ಹಿಡಿದು) ಆದರ ಆ ಹಕ್ಕಿ ಇಲ್ಲಿ ತನ್ನ ಪುಚ್ಚಾ ಉದರಿಸಿ ಹೋಗೇದ ಹಂ! ಹಂ! (ಉರುಳಿದ ತಂಬಿಗೆಯನ್ನು ಕಾಲಿನಿಂದೊದೆಯುವನು.)

ಮುದುಕಿ— ಹಕ್ಕಿಯೆಲ್ಲೀ ಹಕ್ಕಿರಿ! ನಾಯೇನು ಶಕಣಾದಾಕಿರೇ ಹಕ್ಕೀ ಸಾಕಾಕ! ಹಕ್ಯಾಗಿನ ಹೋರೀ ಮಾತ್ರ ಹೊಲದಾಗ ಮೇಯಾಕ ಬಿಟ್ಟಿರತೇನರಿ, ರಾತ್ರಿ ಯಾಳ್ಯಾಕ; ಬಲು ಇರಕಳರೀ ಆ ಹೋರಿ! ಮತ್ತ ಆದರ ಹಾದಿಗೆ ಹೋಗಬ್ಯಾಡ್ರಿ; ಎಲಬು ನುಗ್ಗು ಆಗೋ ಆಟ! (ಸಿ. ಆಯ್. ಡಿ. ಕಡೆ ತಿರುಗಿ) ಮತ್ತೇನು 'ಚಾ' ಮಾಡಂತಿಯೇನು ಬಸನಿಂಗಣ್ಣ, ಸಾಹೇಬರದಸಿಂದ? (ಅಷ್ಟರಲ್ಲಿ ಸೊಸೆ ಗಂಟು ಹೊತ್ತುಕೊಂಡು ಬರುವಳು. ನೆರೆದವರನ್ನೆಲ್ಲ ನೋಡಿ ಗಾಬರಿಗೊಂಡು, ಗಂಟು ಚಲ್ಲಿ ಒಂದು ಮೂಲೆಗೆ ಸರಿದು ನಿಲ್ಲುವಳು. ರಾಘುಪ್ಪಗೌಡರು ಅವಳನ್ನು ಗಂಭೀರ ಭಾವದಿಂದ ನೋಡುತ್ತಿರಲು "ಸುಪರಿಂಟೆಂಡ"ರು ಅವಳನ್ನು ಅನುಲಕ್ಷಿಸಿ ಮುದುಕಿಯನ್ನು ಉದ್ದೇಶಿಸುವರು.)

ಸುಪ್ರಿ— ಇದೂ ನಿನ್ನ ಹಕ್ಕಲದ ಸಾದ ಆಕಳು ಏನು!........... ಹಂ! (ಪೋಲೀಸರಿಗೆ) ಹಂ! ಮನಿಯೆಲ್ಲಾ ತಪಾಸ ಮಾಡ್ರೋ! ಕಿತ್ತಿ ಹಾಕಿರಿ, ಆ ಗಡಗಂಚೀ, ಅಡಕಲಾ, ಡೊಳ್ಳಾರಿ, ಹೊರಸು ಎಲ್ಲಾ........ (ಪೋಲೀಸರೂ, ಸೋಲ್ಜರರು ಮನೆಯ ಒಳಹೊಕ್ಕು ಎಲ್ಲಾ ಹುಡುಕಾಡುವರು; ಆಮೇಲೆ ಒಳಮನೆ ಹಿತ್ತಲ ಕಡೆಗೆ ನುಗ್ಗುವರು.)

ಮುದುಕಿ— ಅಯ್ಯ; ಮಾರಾಯಾ! ಹಾಂಗ್ಯಾಕಂತೀಯೋ ಯಪ್ಪ! ನಾವೇನು ಬಡಸುಳೀ ಮಕ್ಕಳು! ನಮುಗ್ಯಾತಕ ಬೇಕು ಇಲ್ಲದ

ಉಸಾಬರೀ! ನೀವೇನೋ ದಾರೀ ತಪ್ಪಿ ಬಂದೀರಿ! (ಗೌಡರ ಕಡೆಗೆ ಕೈಮಾಡಿ) ನಮ್ಮ ರಾಘಪ್ಪಗೌಡರೇನು ಅರೇವವರು ?

**ಸುಪ್ರಿ**— ದಾರೀ ತಪ್ಪಿ ಬಂದೇವ್ರೋ, ಜಾಡು ಹಿಡದೇ ಬಂದೇವ್ರೋ ಕೇಳು ನಿಮ್ಮ ರಾಘಪ್ಪಗೌಡರನ್ನ! (ಆತ ಗೌಡನ ಕಡೆಗೆ, ಗೌಡ ಮುದುಕಿಯ ಕಡೆಗೆ ಅರೆಗಣ್ಣಾಚಿ ನೋಡುವವರು) ರಾಘಪ್ಪಗೌಡರು, ಇಷ್ಟು ದಿನಾ ಹುಡುಕೋ ಬ್ಯಾಟೀ ಇಂದ ಬಲಿಗೆ ಬಿದ್ದಾಂಗ ಆತು ನೋಡ್ರಿ! ಇಕಾ ನೆಲಾ ಎಲ್ಲಾ ತೊಯ್ದ ರೀತಿ ನೋಡ್ರಿ; ಇವು ನೋಡ್ರಿ ಇದೇ ಈಗ ಮೂಡಿದ ಗಂಡಸಿನ ಹೆಜ್ಜೆ; ಅಕಾ, ಅಲ್ಲಿ ತಪತಪಾ ತೊಯ್ದ ಗೊಂಗಡೀ! ಮತ್ತಿದೇ ಈಗ ಉಂಡೆದ್ದ ಈ ಗಂಗಾಳಾ!

**ಮುದುಕಿ**— ಅಯ್ಯ ನನ್ನ ಶಿವನು! ಇಕಾ ಇದೇಗ ನಾನು ಉಂಡೆದ್ದು ಕೈ ತೊಳೆದೇನು! ನೋಡಬಾರದು ಕೈಯಿನ್ನೂ ಒದ್ದಿ ಅದಾವು!

**ಸುಪ್ರಿ**— (ಸಿ. ಆಯ್‌ಡೀಗೆ) ನೋಡೋ, ಆ ಗಂಟು ಬಿಚ್ಚಿ ನೋಡು!

**ಸಿ ಆಯ್‌ಡಿ**— ಸಾಹೇಬರನ್ನ ನೋಡಿ ಹೆದರಿ ಜೆನತಿದ್ದಾವೇಳು ನಿನ್ನ ಕೈ! (ಎನ್ನುತ್ತ ಸುಪ್ರಿಟೆಂಡರ ಸೂಚನೆಯು ಮೇರೆಗೆ ಸೂಸೆ ತಂಪು ಚಲ್ಲಿದ ಗಂಟು ಬಿಚ್ಚಿ ತೋರಿಸುವನು; ಅಷ್ಟರಲ್ಲಿ ಒಳಗಿನಿಂದ ಬಂದ ಪೋಲೀಸನ ಕರೆಯ ಮೇರೆಗೆ ಸಿ. ಆಯುಡಿಯೂ ಹಿತ್ತಲದ ಕಡೆ ಹೋಗುವನು.)

**ಸುಪ್ರಿ**— ಎಬೇ ಮುದುಕೀ, ಈ ಎರಡು ಮಣದ ರೊಟ್ಟೀಯೇನು ನಿನ್ನ ನ್ಯಾರೀದಸಿಂದ ತರಿಸಿದ್ದೀನು? ನೋಡ್ರಿ, ರಾಘಪ್ಪಗೌಡರು ಈ ರೊಟ್ಟೀ ಗಂಟಿನ ಮೇಲಿಂದ ಈ ಜನರ ಇವತ್ತಿನ ಹಂಚಿಕೆ ಏನಿದೆ ಎನ್ನೋದು ಒಡೆದು ಕಾಣುವಂತಿದೆ. ಇಷ್ಟೊತ್ತು ಇವರದೊಂದು ಗುಂಪಿಗೆ ಗುಂಪೇ ಹೋಂಟಿರಬೇಕು; ರೊಟ್ಟೀ ಗಂಟು ಹೊರಡು ವದರಲ್ಲಿತ್ತು, ಎಂದವೇಲೆ,-ಹತ್ತರದಲ್ಲೆ ಯಾರಾದರೂ ಇರಲೇ ಬೇಕು! (ಬಾಗಿಲು ಕಡೆಗೆ ತಿರುಗಿ) ಫೋಜದಾರ ಸಾಹೇಬರೇ, ಸಾರ್ಜೆಂಟ ಸಾಹೇಬರ ಕಡೆ ಪೋಲೀಸನ್ನ ಓಡಿಸಿರಿ—ಮತ್ತ, ಗೋಕಾಪಿ, ಸತ್ತೀಗೇರಿ, ಕೊರಕೊಪ್ಪ, ಮುನವಳ್ಳಿ, ತೊರಗಲ್ಲು, ಮುರಗೋಡ, ಕಡಿಬಿ ರಸ್ತೆಗಳಿಗೆಲ್ಲಾ ಮಶೀನ್‌ಗನ್ನ ಸಹಿತ ಮೋಟಾರ ಸಾಯ ಕಲ್ ಸೋಲ್ಜರರನ್ನ ಕಳಿಸಲಿಕ್ಕೆ ಹೇಳ್ರಿ. ಜೀಟಿ ಕೈಯುಳಪಿನಲ್ಲೀ

ಅದೆ! (ಮುದುಕಿಗೆ ರೊಚ್ಚು ಆವೇಶಗಳು ಹೆಚ್ಚಿದರೂ ಆ ಭಾವಗಳನ್ನು ಕಂಣಂಚು ದಾಟದಂತೆ ತಡೆಯುವಳು. ಸೊಸೆ ಹೌಹಾರಿದಂತೆ ಸಣ್ಣ ದನಿಯಲ್ಲಿಯೇ ಚೀರಿ ಇನ್ನೂ ಮೂಲೆಗೆ ಸರಿಯುವಳು. ಗೌಡರು ಗಾಬರಿಯಿಂದ ಅತ್ತಿತ್ತ ಅಲೆ ದಾಡುವರು. ಹಿತ್ತಲಲ್ಲಿ ಹುಡುಕ ಹೋದವರು ಬರಿಗೈಯಲ್ಲಿ ಬರುವರು.)

**ಪೋಲೀಸ**— ಉಧರ ತೋ ಕುಛ್ ನಹೀ ಸಾಬ್; ಟಾರ್ಚ್ ಲಗಾಕರ್ ಸಬ್ ದೇಖಾ.

**ಸಿ. ಆಯ್. ಡಿ.**—(ಹಿಂದಿನಿಂದ ಬರುತ್ತ) ಸಾಹೇಬರs. ಒಬ್ಬ ಗಂಡಸಿನ ಹೆಜ್ಜೆ ಮಾತ್ರ ಒಣಬಿಯ ತನಕಾ ಮೂಡಿ ಮುಂದ ಒಮ್ಮೆಲೆ ಮಾಯ ಆಧಂಗ ಕಾಣತಾವು.

**ಸೊಸೆ**— (ಸಣ್ಣ ದನಿಯಲ್ಲಿಯೇ ಕಾತರದ ಆತುರತೆಯಿಂದ) ಇದೇ ಈಗ ನಾನs ಹೋಗಿ ಬಂದೆನಲ್ಲರೀ ಯಪ್ಪಾ.

**ಸುಪ್ರಿ**— ಹೋಗಿ ಬಂದಾಕೀ ಬರೂವಾಗ ಕಾಲು ಏನು ತಲೀಯ ಮ್ಯಾಲ ಇಟ್ಟುಕೊಂಡು ಬಂದಿಯೇನು!

**ಸಿ. ಆಯ್. ಡಿ.**— ಅಲ್ಲಾ, ಈ ಮಾಟನ್ನ ಅರಗಳೀ ಕಾಲು ಹುದುಲಿನಾಗ ಹಣುಮಪ್ಪನ ಹೆಜ್ಜೆ ಆದ್ವೊ ಏನು ಅಂತೇನು.

**ಮುದುಕಿ**— ಅದೇನು ಬಿಡು; ಅವಸರದಾಗ ಅಷ್ಟು ಒತ್ತಿ ನಡೀಬಾರದೂ!

**ಸಿ. ಆಯ್. ಡಿ.**— ಇಂಥಾ ಮಂದಮಗನಿಗೆ ಅಂಥಾದೇನು ಅವಸರದ ಕೆಲಸವಾ ಅಂತೇನು!

(ಗೌಡರು ಈ ಚೇಷ್ಟೆ ತಮಗೆ ಸೇರದಂತೆ ತಿರುಗಿ ಕೈಕಟ್ಟಿ ನಿಲ್ಲುವರು.)

**ಸುಪ್ರಿ**— ನಡಿ, ನಡೀರಿ ನೋಡೋಣ ಆ ‘ಜಾದೂ’ ಏನು ಅದೆ. (ಸಿ. ಆಯ್. ಡಿ. ಯೊಂದಿಗೆ ಹಿತ್ತಲಕಡೆ ಹೋಗುವನು. ಪೋಲೀಸ ಮಾತ್ರ ಅಲ್ಲೇ ಉಳಿಯುವನು.)

**ಮುದುಕಿ**— (ಗೌಡರನ್ನುದ್ದೇಶಿಸಿ) ರಾಘಪ್ಪ ಗೌಡರ! ಇದೇನ್ರಿ? ಇದು ಹ್ಯಾಂಗ ಆತs ಅಂತೇನಿs? ..........(ಗೌಡರು ಅವಳನ್ನು ಅರ್ಧಕ್ಕೆ ತಡೆದು ಸಮಾಧಾನ ಹಾಗೂ ಧೈರ್ಯದಿಂದ ವರ್ತಿಸಲು ಕೈಸನ್ನೆಯಿಂದ ತಿಳಿಸುವರು. ಸಿಪಾಯಿ ಮುದುಕಿಯ ಮಾತು ಕೇಳಲೆಂಬಂತೆ ಬಾಗಿ ಕಿವಿ ಚಾಚಿರುವನು.) ಏs ಏಟುದ್ದs ಕಿವಿ ಹಿಗ್ಗಸತೀ. ಅಲ್ಲಾ ಚಂಜೀಕಡೆ ಬಂದಾಗ ಇವಗ ನಮ್ಮ ಕನ್ನಡ ಮಾತು ಬರತಿದ್ದಿಲ್ಲಾ; ಈಗ ಕಿವಿಮಾತು

ಕೇಳಲಾಕ ನಿಂತಾನ ಜೋಕುಮಾರ. (ಇದೇ ಹೊತ್ತಿಗೆ ಸರಿಯಾಗಿ ಮಲ್ಲಣ್ಣನನ್ನು ಬಂಧಿಸಿಕೊಂಡು ಸುಪರಿಂಟೆಂಡೆಂಟರೂ ಸಿ. ಆಯ್. ಡಿಯೂ ಬರುವರು. ಮುದುಕಿ ಉದ್ವೇಗವಶಳಾಗಿ ಎದೆ ಹಿಚುಕುತ್ತ ಕಣ್ಣು ಕಿಸಿದು ನೆಟಿದು ನಿಲ್ಲುವಳು. ನೊಸೆ ಕೈಗಳಿಂದ ಬಾಯಿ ಮುಚ್ಚಿಕೊಂಡು ಜೋರಾಗಿ ಚೀರಿ ನೆಲ್ಲಕ್ಕೆ ಕುಪ್ಪಳಿಸುವಳು.)

**ಸುಪ್ರಿ**— ಏ ಮುದಿಕೀ, ಇಕಾ ಈ ನಿನ್ನ ಹೋರಿ ಬಣವೀ ಮ್ಯಾಗ ಹತ್ತಿ ಮೇಯಾಕ ಹತ್ತಿತ್ತು; ಮುಗದಾಣಾ ಹಾಕಿ ಹಿಡಿದು ತಂದೀವಿ! ಇನ್ನ ಇದು ನನ್ನ ಕೈಯಾಗಿಂದ ಪಾರ ಆದೀತು ಹ್ಯಾಂಗ ನೋಡೋಣ. ಈ ಸುಪರಿಂಟೆಂಡೆಂಟ್ ಸಿವನಾಗಪ್ಪ ಅಂದರ ಹುಲೀ ಬ್ಯಾಟೀ ಆಡೋವ; ಇಂಥಾ ಹೋರಿ ಯಾವ ಮಾತಿನ್ಯಾ!! ಆದರs ಇದು ಇನ್ನೂ ಎಳಕ ಹೋರಿ; ಕೋಡ ಮೂಡಿಲ್ಲ ಇನ್ನೂ. ಈ ಮಣಕ ಆಕಳ ಮಾತ್ರ (ನೊಸೆಕಡೆ ನೋಡುತ್ತ) ಪಾಡಿಗೆ ಬಂದ್ಹಾಂಗ ಕಾಣತೈತಿ.

**ಮಲ್ಲಣ್ಣ**— (ಮೊದಲೇ ರೊಚ್ಚಿಗೆದ್ದವ ಮತ್ತಿಷ್ಟು ಕೆರಳಿ) ಹಂ. ನಾಲಿಗಿ ಬಿಗೀ ಹಿಡೀರಪ್ಪಾ.

**ಸುಪ್ರಿ**— ಯಾಕs ಹಗ್ಗದ ಬಿಗಿತ ಸಾಕಾಗಿಲ್ಲೇನ ಇನ್ನೂ.

**ಮಲ್ಲಣ್ಣ**— ಈ ರಟ್ಟೀ ಬಿಗಿತ ಇಲ್ಲಿಗೆ (ಕೊರಳು ತೋರಿಸಿ) ಬಿದ್ದರೂ ಇನ್ನೊಮ್ಮೆ ಬಾಯಿ ಬಿಟ್ಟರ ನೋಡ್ರಿ, ಮತ್ತ, ನಿಮಗೆ ಯಾರಿಗೂ ನಾನು ಅಸ ಗೊಳ್ಳಾಕಿಲ್ಲ. ಯಾರ ಮುಂದ ನಿಂತು ಮಾತಾಡತೀರಿ ಅನ್ನೂದರ ಎಚ್ಚರ ಇರ್ಲಿ. ಹಂ, ಹಂ.

**ಸಿ. ಆಯ್. ಡಿ.**— ನಮ್ಮ ಕನಸ ಮನಸಿನೊಳಗ ಇಲ್ಲದಿದ್ದರೂ ಮೂರು ತಿಂಗಳ ಮರೆಯಾಡಿಸಿ ಈವತ್ತ ಹತ್ತರಿಕಿ ಮಲ್ಲಪ್ಪನವರೇ ನಮ್ಮ ಪಂಜರದೊಳಗ ಬಿದ್ದಾರಂತ ಗೊತ್ತೈತಿ ನಮಗೆಲ್ಲಾ. ಸರಕಾರ ಕೊಡೋ ಐದು ಸಾವಿರ ರೂಪಾಯಿ ಇನಾಮೇನು ಪುಕ್ಕಟ ಅಲ್ಲ.

**ಮಲ್ಲಣ್ಣ**— ಅಂತೂ ಐದುಸಾವಿರದ ಆಶಾಕ್ಕ ನೀವು ನಿಮ್ಮ ಮಾನಾ ಮರ್ಯಾದೀ, ನಿಮ್ಮ ಜನರ ಕಕಲಾತೀ, ನಿಮ್ಮ ದೇಶದ ಕೀರ್ತಿ ಎಲ್ಲಾ ಮಾರಾಕ ನಿಂತೀರಲ್ಲs? ಅಂಥಾ ಸೊಟ್ಟ ಐದು ಸಾವಿರ ನಿಮ್ಮ ಮೋತೀಮ್ಯಾಲ ನಾನs ಥಲ್ಲೇನು.

ಸುಪ್ರಿ— ಮತ್ತ ನಾಳೆ ನಮಗ ಮ್ಯಾಲಿನ ಹುದ್ದೇ ಬಡತೀ ಎಲ್ಲಾ ನೀನೇ ಕೊಡತೀ ಏನು? ಹಂ. ಹಾ. ಹಾ (ಮಲ್ಲಣ್ಣ ಅರ್ಧ ಸಿರುಪಾಯತೆಯಿಂದ ಹಲ್ಲು ಕಡಿಯುವನು. ಸುಪರಿಂಟೆಂಡನು ಆ ಕಡೆಯಿಂದ ಮೇಜು ಎಳಕೊಳ್ಳುವನು. ಸಿಪಾಯಿ ಬಾಕು ಹೊಂದಿಸಿಡಲು ಪೋಲೀಸ ಕೋರ್ಟಿನ ಆಥ್ಯತೆಯಿಂದ ಕುಳಿತು ಮಲ್ಲಣ್ಣನ ಕೇಸು ನಡೆಯಿಸುವನು. ಸೀಪಾಯರು ಮಲ್ಲಂಣನನ್ನು ಎದುರಿಗೆ ಎಳೆದು ನಿಲ್ಲಿಸುವರು. ಒಬ್ಬನು ಸುಪರಿಂಟೆಂಡೆಂಟನ ಓಂಬದಿಗೆ ನಿಲ್ಲುವನು. ಸುಪ್ರಿಟೆಂಡೆಂಟನು ಗೌಡರನ್ನು ಕರೆದು ತಮ್ಮ ಬದಿಯಲ್ಲಿ ನಿಲ್ಲಿಸಿಕೊಳ್ಳುವನು; ಹಾಗು ಮಲ್ಲಂಣನನ್ನು ಉದ್ದೇಶಿಸಿ ಮಾತನಾಡುವನು.) ಇಕಾ ಇಲ್ಲಿ ಕೇಳಪಾ ಮಲ್ಲಂಣಾ, ಅಲ್ಲಾ ದೇಶದ ದಶಿಂದ ಹೋಡದಾಡೋ ನೀವು ಇಂಥಾ ಹೆಗ್ಗಣದಾಟಾ ಯಾಕ ನಡಸತೀರಿ? ಅಲ್ಲಾ ಈವತ್ತ ಗೋಕಾವಿ ಆಚೆಗೆ ಪೋಲೀಸರಿಗೆಲ್ಲಾ ಮಂಕು ಬಡೆದು ನೆಲಾ ಹೊಕ್ಕ ಪಾರು ಆದ ಆ ನಿಮ್ಮ ದೊಡ್ಡ ಮುಂದಾಳುಗಳೆಲ್ಲಿದ್ದಾರಂಬೋದು ನಿನಗೇ ಗೊತ್ತು ಅದೆ ಅಂತ ಸರಕಾರಕ್ಕ ಖಾತ್ರಿ ಆಗೇದ ಏನಪಾ. ಅಲ್ಲದೆ ಮುಧೋಳದ ಗಡೀ ದಾಟಿ ಎರಡು ಬ್ಯಾಡರ ತಂಡ. ನಿಮ್ಮ ಬಣದಾಗ ಹೊಕ್ಕೊಂಡದ್ದೂ ನಮಗ ತಿಳೀದೇ ಇಲ್ಲಾ. ಮತ್ತ ಆಗಸ್ಟ ಒಂಭತ್ತನೇ ತಾರೀಖಿನಿಂದಾ ಸರಕಾರದ ವಾರಂಟು ಇದ್ದಂಥಾ ಕರ್ನಾಟಕದ ಏಳೆಂಟು ಜನಾ ಮುಂದಾಳುಗಳನ್ನು ನೀವು ಗುದ್ದಾ ಹೊಗಿಸಿ ಇಟ್ಟದ್ದೂ ನಮಗ ಎಲ್ಲಾ ಗೊತ್ತಾಗೇದ. ಮೊಗಲಾಯಿಯಿಂದ ಮತ್ತ ಗೋವಾ ಪ್ರಾಂತದಿಂದ ನೀವು ನಾನಾ ತರದ ಆಯುಧಗಳನ್ನು ತರಿಸಿದ್ದರ ಪುರಾವೇನೂ ನಮಗ ಸಿಕ್ಕ್ಯಾವ. ಈ ಎರಡು ತಿಂಗಳದಾಗ ಎಷ್ಟು ಚಾವಡಿ, ಸರಕಾರೀ ಬಂಗಲೇ, ಸ್ಟೇಶನ್ನು ಸುಟ್ಟ್ಯಾವೋ, ಎಷ್ಟು ಗಾಡಿಗಳು ಹಳೀತಪ್ಪಿ ಉರಳ್ಯಾವೋ, ಎಷ್ಟು ಸರಕಾರದ ಕಾಳುಕಡಿ ಅಂಗಡೀ ಹಾಗೂ ಟ್ರೆಝರೀ ಹಣಾ 'ಲೂಟು' ಆಗ್ಯಾವೋ ಅದಕೆಲ್ಲಾ ನೀನೇ ಹೊಣೆಗಾರಂತೂ ಸರಕಾರಕ್ಕ ಪೂರಾ ಖಾತ್ರೀ ಆಗೇದ. ಮತ್ತ ಇಲ್ಲಿ ಸುತ್ತಲೂ, ರಾಮದುರ್ಗ ಜಮಖಂಡೀ ಮುಧೋಳ ಸಂಸ್ಥಾನಗಳಲ್ಲಿ ನೀವೇನೇನು ಚಲ್ಲಾಟಾ ನಡಿಸೀರಿ ಅನ್ನೋದು ನಮ್ಮ ಸಾಕ್ಷೀಗೆ ಬಂದದ. ಒಟ್ಟಿನಮ್ಯಾಲೆ ಜಾರ್ಜ

ಬಾದಶಹರ ವಿರುದ್ಧ ಬಂಡು ಎಬ್ಬಿಸೂದಕ್ಕ ನೀನು ಜವಾಬದಾರ್ ಇದ್ದೀ ಹೌಂದಲ್ಲೋ? ಏನಂತೀ ಇದಕ್ಕೆಲ್ಲಾ. (ಮಲ್ಲಂಣ ಎದೆ ಸೆಟಿಸಿ ಗೋಣು ತಿರುವಿ ಕಂಣೇರಿಸಿ ಸುಮ್ಮನೇ ನಿಲ್ಲುತ್ತಾನೆ.) ಯಾಕ ನೀ ಇದನ್ನೆಲ್ಲಾ ಒಡಂಬಡುತ್ತೀಯುಷ್ಟೇ? (ಮಲ್ಲಂಣ ಮತ್ತಷ್ಟು ಸೆಟೆದು ತಿರುಗಿ ನಿಲ್ಲಲು) ಬಿಡು, ಬಿಡು ಮಲ್ಲಂಣಾ, ಇತ್ತಲಾಗ ತಿರುಗು; ಇಕಾ ನನ್ನ ಮಾತ ಕೇಳು! ನೀ ಇನ್ನೂ ಹುಡುಗ, ಹಳ್ಳೀ ಹುಂಬ; ಮಹಾಚಕ್ರವರ್ತಿಗಳ ಕಾರಭಾರ ಅಂದರೇನು? ಅವರ ವಿರುದ್ಧ ನಿನ್ನಂಥಾ ಪೋರ ನಿಲ್ಲೋದಂದ್ರೇನು? ಸುಮ್ಮನೇ ಈ ಬಿಳೇ ಟೊಪ್ಪಿಗೆಯು ನಾಲ್ಕ ಮಂದಿ, ತಮ್ಮ ಬ್ಯಾಳೀ ಬೇಯಿಸಿಕೊಳ್ಳೋದಕ್ಕಾಗಿ ನಿಮ್ಮಂಥಾ ತಿಳಿಗೇಡಿ ಜನರನ್ನ ನಡುವ ಹಾಕಿ, ತಾವು-ತಾವು, ಊರ ಸುಟ್ರೂ ಹಣಮುಪ್ಪ ಹೊರಗಂತ, ಇರತಾರೇನಪಾ. ಬಾ ಇತ್ತ. ನಾ ನಿನ್ನದೂ, ನಿನ್ನ ಕುಟುಂಬದ್ದೂ, ಹಿತಾ ಆಗೋ ಮಾತು ಹೇಳತೇನಿ. (ಮಲ್ಲಂಣ ಹಾಗೇ ಮತ್ತಷ್ಟು ಆಚೆಗೆ ಸರಿಯುತ್ತಾನೆ. ಮುದುಕಿ ಮೂಗೇರಿಸಿ ಸುಪ್ರಿಟೆಂಡನ ಫಜೀತಿ ಮಾಡುವ ನೋಟದಿಂದ ನೋಡುತ್ತಾಳೆ. ಗೌಡರು ಅವ್ಯಕ್ತ ಸಮಾಧಾನದಿಂದ ಇದ್ದಾರೆ.)

ಸುಪ್ರಿ— (ಬಗೆಹರಿಯುದ್ದನ್ನು ಇನ್ನಷ್ಟು ಬಗೆಯುತ್ತ) ನೋಡು ಮಲ್ಲಂಣಾ, ನೀ ನನ್ನ ಮಾತು ಕೇಳಿದರ, ಇಷ್ಟು ದಿನಾ ನಿನ್ನದೆಷ್ಟೇ ಅಪರಾಧ ಆಗಿದ್ದರೂ ಅದನ್ನೆಲ್ಲಾ ಕ್ಷಮಿಸಿ ನಿನ್ನ ಕೂದಲು ಕೊಂಕದಂತೆ ನಾನು ನೋಡಿಕೊಳ್ಳತೇನಿ. ನಮಗ ಈಗ ಬೇಕಾದ ಹಕೀಕತ್ತು* ಅಷ್ಟ ಹೇಳಿಬಿಟ್ರ ನೀವೆಲ್ಲಾರೂ ಪಾರ ಆದ್ರಿ ಅಂತಽಽ ತಿಳಕೋ; ಅದ್ಯಾಕ ಮತ್ತ ಮ್ಯಾಲ ನಿನಗ ಸರಕಾರದಿಂದ ಸಾವಿರ ರೂಪಾಯಿ ಇನಾಮೂ ಮತ್ತು ಒಂದು ಚಲೋ ಹುದ್ದೇ‡ ಸಿಗೂಹಾಂಗ ಮಾಡತೀನಿ ತಿಳಿತೇನು? ಏನ ಇದ್ದದ್ದು ಹೇಳಿಬಿಡು. ಇನ್ನೂ ಹುಡುಗ ನೀನು. (ಆತ ಮತ್ತಷ್ಟು ಅವಜ್ಞೆಯಿಂದ ತುಟಿ ಎರಡು ಮಾಡದಿರಲು ಸುಪ್ರಿಟೆಂಡನ ಅನುನಯು ವ್ಯರ್ಥವಾಗಿ ಅವನ ಪಿತ್ತ ನೆತ್ತಿಗೇರುವದು; ಉನ್ಮತ್ತನಂತೆ ಕಾಲಪ್ಪಳಿಸುತ್ತ ಅತ್ತಿತ್ತ ಓಡಾಡುವನು.)

---

* ಸುದ್ದಿ; ‡ ಅಧಿಕಾರ.

ಸುಪ್ರಿ—(ಕೊನೆಗೆ ಮಲ್ಲಣ್ಣನನ್ನು ಸಮೀಪಿಸಿ,) ಏ; ನಾ ಇಷ್ಟು ತಿಳೀ ಹೇಳಿದರೂ ನಿನ್ನ ಮಡ್ಡ ತಲೀಯೊಳಗ ಸೇರವಲ್ಲದೇನೊ? ಇಕಾ ಮಲ್ಲಣ್ಣಾ (ಗಂಭೀರವಾಗಿ) ಇತ್ತಲಾಗ ತಿರುಗಿ ನಿಂದರು; ಯಾರ ಮುಂದ ನಿಂತೀ ಅಂತ ಲಕ್ಷ್ಯದೊಳಗ ಇಡು. ಮತ್ತ ಏನಿದ್ದದ್ದು ಒಮ್ಮೆಲ್ಲಾ ಹೇಳಿಬಿಡು. ಹುಂ, ಏನಂದೀ? (ಮಲ್ಲಣ್ಣ ಇದಾವುದನ್ನೂ ಗಮನಿಸದಂತೆ ಖೇಕರಿಸಿ ಉಗುಳಿ ಎದೆ ಸೆಟೆಸಿ ಉಬ್ಬಿಸಿ ನಿಲ್ಲುವನು. ಮುಖ ಅಭಿನಯದ ಸಂಕೇತದಿಂದ ಮಗನನ್ನೂ ಗೌಡರನ್ನೂ ಮಾಲಿಸುವಳು. ಸೂಕೆ ಮಾಲೆಯಲ್ಲಿ ಹೆದರಿಕೊಂಡು ಕುಳಿತಲ್ಲಿಯೇ ಯಾಚನೆಯ ಭಾವವನ್ನು ತೋರಿಸುವಳು.)

ಸುಪ್ರಿ—(ಇವನ್ನೆಲ್ಲ ಗಮನಿಸಿ ಕೋಪದಾವೇಶದ ಸ್ವರದಲ್ಲಿ) ಏ ಕತ್ತೀ ಸೂಳೆಮಗನೆ! ಬೊಗಳುತಿಯೋ ಏನಂತೀ!! ಅಂ!!! ರಾಘಪ್ಪಗೌಡರ, ತಗೊಳ್ರಿ ಆ ಚಬಕಾನ; ಒಂದನಾಲ್ಕು ಲಗಾಯಿಸಿರಿ, ಇವನ ಮೈ ಹುಳಿಯೋ ಹಾಂಗ; ಬಾಯಿ ಬಿಚ್ಚತಾನೋ ಇಲ್ಲೋ ನೋಡೇ ಬಿಡೋಣ! ಸಮಗಾರ ದೇವರಿಗೆ ಮಚ್ಚೀಪೆಟ್ಟು ಅನ್ನೋದೇನು ಸುಳ್ಳಲ್ಲ! ಕೊಡ್ರಿ ನಾಕು ತಪರಾಕಿ;* ಅನುಮಾನಿಸತೀರಿ ಯಾಕ ಗೌಡರ?

ಮಲ್ಲಣ್ಣ—(ಗೌಡರು ಅನುಮಾನದ ಸ್ಥಿತಿಯಲ್ಲಿದ್ದದ್ದನ್ನು ಗಮನಿಸಿ) ಆಯಿತು. ನಾನೇ ಮಾತಾಡತೀನಿ. ನಿಮ್ಮ ನಾಲಗಿ, ಆ ಚಬಕದಕಿಂತ ಉದ್ದ ಆದಷ್ಟು, ನಾನೇ ಕತ್ತರಸತೀನಿ. ಇಕಾ ಹುಟ್ಟ ತಳವಾರ ಜಾತಿ ನಮ್ಮದು. ನಾ ಎಂದೂ ಕುಲಕ್ಕ ಕಪ್ಪು ಹಚ್ಚುವವ ಅಲ್ಲಾ. ಒಂದು ಮಾತ ಹೇಳತೀನಿ ಕೇಳಿಕೊಳ್ರಿ; ಈ ಎರಗಟ್ಟೀ ಸೀಮಿಯೊಳಗಿನ ಮರಡೀಯೆಲ್ಲಾ ಮಾತಾಡಿಸಿದರೂ ಆಡಸಬಹುದು; ಆದರ ನನ್ನ ಹೊಟ್ಟೀ ಒಳಗಿನ ಮಾತು ಕರುಳು ಬಗಿದರೂ ಹೊರಗ ಬರಲಿಕ್ಕಿಲ್ಲಾ ಅನ್ನೋದನ್ನ ಹದಿನಾರಾಣೆ ಖಾತ್ರಿ ಹಿಡೀರಿ.

ಸುಪ್ರಿ—(ದ್ವೇಷದಿಂದ) ನೋಡತೀನಿ ನೋಡತೀನಿ ನಿನ್ನಂಥವರನ್ಯಾಕ,

---

* ಏಟು

ನಿಮ್ಮಪ್ಪನಂಥವರನ್ನ (ಮುದುಕಿ "ಹಾಂ" ಎನ್ನುವಳು; ಮಲ್ಲಣ್ಣ "ಏ!" ಅನ್ನುವನು.) ಮಸ್ತ ಬಲ್ಲೆ, ಬಿಡು ಇದೆಲ್ಲಾ ಹುಡಗಾಟಿಕಿ; ಈ ಶಿವ ನಾಗಪ್ಪಂದ್ರ ಏನಂದಿ? ಒಂದಕಾಲಕ್ಕ ಧಾರವಾಡ, ಗುಬ್ಬಳ್ಳಿ ಯಂಥಾ ಊರಿಗೆ ಊರೇ ಹುರಿದುಬಿಟ್ಟಿ; ಗೊತ್ತಾದರೂ ಐತೇ? ಇಕಾ; ನಾಲ್ವತ್ತು ವರ್ಷ ಸರ್ವ್ಹಿಸ ಆಗಿ ಮತ್ತ ಈಗ ಸರಕಾರ ದವರು ಬಿಡಲಾರದ ಒಂದು ವರ್ಷದ ಎಕ್ಸ್‌ಟೆನ್‌ಶನ್ ಕೊಟ್ಟಾರ; ನಾ ತಿಳಿದ ಮಟ್ಟಿಗೆ ಕೇಳಿಕೋ ಪ್ರೋರಾ; ಹುಚ್ಚರೂ-ಹೆಣಗಳೂ- ಇವರಿಬ್ಬರ ಮನ ಒಲಿಸೋದು ಆಗಲಿಕ್ಕಿಲ್ಲ. ಇದು ನನ್ನ ನಾಲ್ವತ್ತೊಂದು ವರ್ಷದ ಅನುಭವದ ಮಾತು.

ಮಲ್ಲಣ್ಣ— ಈ ನಾಲ್ವತ್ತೆರಡರಾಗ ನಿಮ್ಮ ಅನುಭವದ ಪುಸ್ತಕದೊಳಗ ನಾ ಹೇಳೋ ಹೊಸಾ ಪಾಠ ಒಂದು ಬರದ ಇಟಗೊಳ್ರಿ, ಈವತ್ತು! ಅಂದ್ರ ಇನ್ನ ಮುಂದಿನ ನಾಲ್ವತ್ತು ವರಷ ಆದರೂ ನಿಮ್ಮ ಬಾಳು ಸುಧಾರಿಸೀತು.

ಸುಪ್ರಿ— ಏ ಎಚ್ಚರ ಇಟಗೊಂಡು ಮಾತಾಡು. ಅಂ. (ಜೇಬಿನಲ್ಲಿಂದ ತೆಗೆದು ನಸ್ಯನ ಡಬ್ಬಿಯನ್ನು ತಟ್ಟುತ್ತ) ಈಗ ನೀ ಬಾಯ ಬಿಚ್ಚೋದು ಶಕ್ಯ ಆಗದಿದ್ದರೂ ನಿನ್ನ ಹೆಣಾ ಬಿದ್ರೂ ಆಗಲಿಕ್ಕಿಲ್ಲೇನು?

ಮಲ್ಲಣ್ಣ— ಹೂಂ. ಹೂಂ. (ಎಂದು ಮೂಗು ಮುರಿದು ಶ್ವಾಸಹೊಡೆದು ತಿರಸ್ಕಾರ ವ್ಯಕ್ತಪಡಿಸುವನು. ಗೌಡರು ಮಲ್ಲಂಣನನ್ನು ಸಿಟ್ಟಿಸುವರು; ಮುದುಕಿ ಕೈ ತಿರುವಿ ಉದಾಸೀನತೆಯನ್ನು ತೋರಿಸುವಳು ಸೊಸೆ ಬಿಕ್ಕಳಿಸುವಳು.)

ಸುಪ್ರಿ— (ಮಲ್ಲಂಣನು ಉತ್ತರಕೊಡದಿರಲು ನಸ್ಯ ಏರಿಸುತ್ತ) ಯಾಕs ಹುಡಗ ಬುದ್ಧೀ! ಹೆದರಿಕೊಂಡಿ ಏನು?

ಮಲ್ಲಣ್ಣ— ಹೆದರಿಕೀ !!! (ಸುಪ್ರಿಟೆಂಡನ ಮೋರೆಯುಕಡೆಗೆ ಥೂ ಹಾಕಿ) ಈ ನಮ್ಮ ಯುರಗಟ್ಟಿ ಸೀಮ್ಯಾಗ ಹುಡುಗರಿಗೂ ಸಹಿತ ಈಗ ನೆನಪಿಲ್ಲಾ, ಹೆದರಕೀ ಅಂದರೇನು ಅಂತ! ತಿಳೀತs!! ಇದ್ದರ ನಿಮಗ ಇದ್ದೀತು ಹೆದರಕಿ! ನಮ್ಮ ನಮ್ಮ ಜನರ ಕುತ್ತಿಗ ಕೊಯ್ದು ಸರಕಾರದ ಬಾಲಾ ಬಡೀದಿದ್ದರ ಎಲ್ಲಿ ಹಿಂಬಡತಿ ಆದೀತೋ ಅನ್ನೋ ಹೆದರಕಿ ನಿಮ್ಗ ಇರಬೇಕು! ದೇವ್ರು ಕೊಟ್ಟ ನೀರೂ,

ಭೂಮಿ ಕೊಟ್ಟ ಕಾಳೂ, ಎರಡೇ ನಂಬಿದ ನಮಗೆ, ಎಲ್ಲೀ ಹೆದರಿಕಿ! ಯಾತರ ಹೆದರಿಕಿ!! ಯಾರ ಹೆದರಿಕಿ!!!

ಸುಪ್ರಿ— (ಅಂಗೈ ನಸ್ಯವನ್ನು ಝಾಡಿಸಿ-ಸಿಟ್ಟಿನಿಂದ ಸಿಡಿದೆದ್ದು) ಹಾಂಗ ಆಡ್ಬ್ಯಾಡೀ ಬೀಳಬ್ಯಾಡೋ; ಸರಕಾರದ ವಿರೋಧ ಮಾಡವರ ಅವಸ್ಥೆ ಏನಾದೀತು ಅಂತ ಗೊತ್ತ ಆದರೂ ಅದ ಏನು? ತಲೆ ಮಾಸ ಹಾರದ ಪೋರಾ! ನಿನ್ನ ಮುಂದಿನ ಗತೀ ನಿನಗ ಗೊತ್ತಿದ್ರ ನೀ ಹೀಂಗ ಮಾತಾಡತಿದ್ದಿಲ್ಲಾ; ಹಃ ಹಃ ಹಃ!

ಮಲ್ಲಣ್ಣ— ಗೊತ್ತೈತಿ, ಗೊತ್ತೈತಿ; ನಾವು ಕೈ ಸೋತಾಗ ನಮ್ಮ ವೈರಿಗಳು ಹ್ಯಾಗೆ ಚಿತ್ರ ಹಿಂಸಾ ಮಾಡಿ ನಮ್ಮ ಹೆಣಾ ಕೆಡವ್ತಾರು ಅನ್ನೊದರ ಕನಸು ಮುಂಗಂಡೇ ನಾವೀ ಕೆಲಸಕ್ಕ ಕೈ ಹಾಕೇವಿ; ತಿಳೀತs! ನಮಗ ನೀವು ಎಂಥೆಂಥಾ ದಂಡಾ ಕೊಡಬಹುದು ಅನ್ನೋದರ ಕೋಷ್ಟಕೂ, ನಿಮಗ ಗೊತ್ತಿರಾಕಿಲ್ಲಾ, ನನ್ನ ಕಡಿಂದ ಕೇಳಿಕೊಳ್ಳಿರಿ ಬೇಕಾದರ; ನಾ ನಿಮ್ಮ ಹಾಂಗ ಹೆಚ್ಚಿಗೆ ಕಲಿತಿಲ್ಲಾ, ನಿಜಾ; ನಾ ಹಳ್ಳೀ ಹುಂಬಾ, ನಿಜಾ; ಅಂದs, ನಿಮ್ಹಾಂಗ ದುಡ್ಡಿನಾಶಾಕ್ಕs ಮತ್ತ ನೌಕರೀ ಮೋಹಕ್ಕs ಬಿದ್ದು ನಾ ನಮ್ಮ ದೇಶಕ್ಕ ಎರಡು ಬಗೆದಿಲ್ಲಾ ಅನ್ನೂದೂ ಅಷ್ಟೇ ನಿಜ. (ಗೌಡರೂ ಮುಖುಕಿಯೂ ಮಲ್ಲಂಣನ ಏರಿಕೆಯ ಉಬ್ಬಿನಲ್ಲಿ ಹೆಚ್ಚೆಚ್ಚು ಬೆರೆಯುತ್ತ ಹೋಗುವರು.) ಸಾಲೀ ಮೂಲೀ ಹೆಚ್ಚಿಗೆ ಕಲೀದಿದ್ದರೂ ನಿಮ್ಮಂಥವರನ್ನ ಮುಂದೆ ಮಾಡಿ ಪರಕೀಯ ಸರಕಾರಾ ನಮ್ಮ ನಾಡಿನೊಳಗ ಹ್ಯಾಂಗ ತನ್ನ ಬ್ಯಾಳೀ ಬೇಯಿಸಿಕೊಳ್ಳತ್ತ ಬಾಣೈತಿ ಅನ್ನೋದನ್ನ ನಮ್ಮ ಜಂಗಿನ ಸ್ವಾಮಿಗೋಳ ಪುಣ್ಯಾದಿಂದ ನಾನೂ ಸ್ವಲ್ಪ ತಿಳಕೊಂಡೀನಿ. ನಾ ಹುಟ್ಟಿ ಬರೆ ಇಪ್ಪತ್ತೈದು ವರಸ ಆದರೂ, ಸರಕಾರದ ಜೋಡಿ ನಮ್ಮ ದೇಶದ ಜಗಳ ಹುಟ್ಟಿ ಇಂದಿಗೆ ನೂರಾ ಇಪ್ಪತ್ತೈದು ವರಸ ಆದ್ವು! ಯಾವತ್ತ ಪೇಶ್ವಾಯಿ ಖಾಲಸಾ ಆತೋ, ಅವತ್ತೇ ಬಿತ್ತು ಈ ಜಗಳದ ಬೀಜ! ದಿಲ್ಲೀ ಬಾದಶಾನ್ನ ಬರ್ಮಾಕ್ಕಟ್ಟಿ, ಬರ್ಮಾದ ಆರಸನ್ನ ಕೊಂಕಣದಾಗ ಕೊಳಿಸಿ, ಪೇಶ್ವಾನ್ನ ಒಯ್ದು ಬ್ರಹ್ಮಾ

ವರ್ತವಲ್ಲಿ ಬಂದೀ ಮಾಡಿ ಎಂದ ನಮ್ಮ ದೇಶ ಮೂರಾಬಟ್ಟೆ ಆತೋ ಅಂದೇ ಹುಟ್ಟೈತೀ ವೈರಾ!! ಬಂಡಾಯುವ ಕಾಲಕ್ಕ, ಬಂಗಾಲದ ಭಂಗಾದ ವ್ಯಾಳ್ಯಾಕ್ಕ, ಸತ್ಯಾಗ್ರಹದ ಹೊತ್ತಿನೊಳಗ ನಮ್ಮ ನಮ್ಮ ಜನರು ಎಂತೆಂಥಾ ಅತ್ಯಾಚಾರಕ್ಕ ಗುರಿ ಆಪರೂ ಅನ್ನೋದು ನಿತ್ಯ ನಮ್ಮ ಕಂಣೆದುರಿಗೆ ಕಟ್ಟೈತಿ!! ಕೋಲಾಟಾ ಚಿಣಿಫಣೀ ಆಡೋ ನಮ್ಮ ಹುಡುಗೋರೂ, ಈಗ ದಿನಾಲು ಜಾಲಿಯನ್‌ವಾಲಾ ಬಾಗದ ಪ್ರಭಾತ ಫೇರಿ ಹಾಡತಿರತಾವ. ನನ್ನಂಥಾ ಸಾವಿರಾರು ಪರೇದ ಹುಡುಗರ ಹೆಣಾ ತುಳದೇ ನಿಮ್ಮಂಥವರು ಗದ್ದಿಗ್ಗೇರತೀರಿ ಅಂತೂ ನಮಗ ಗೊತ್ತೈತಿ! ಈ ಜಗಳದ್ದಶಿಂದ ಕರೇಸೀರು ಕಂಡವರೆಷ್ಟು! ಗಲ್ಲಿಗೇರಿ ಜೋತಾಡಿ ದವರೆಷ್ಟು!! ಗುಂಡಿಗೆದೆಗೊಟ್ಟ ನೆತ್ತರಾ ಬಿತ್ತಿದವರೆಷ್ಟು!!!........ ಲಾಠೀ ಹೊಡತಕ್ಕ ತುತ್ತಾದವರೆಷ್ಟ!!! ಹಿಡಿಸಲಾರದೆ ತುಂಬಿದ ನಿಮ್ಮ ಸೆರೆಮನೆಗಳ ಹೇಸಿಗೆಯಲ್ಲಿ ಹೊರಳಾಡಿದವರೆಷ್ಟು!!! ಇದೆಲ್ಲಾ ಎಷ್ಟು? ಎಷ್ಟು?.... ಒಟ್ಟೆಟ್ಟು ಎಣಿಸಾಕ ಕುಂತ್ರ ಮುಗಿ ಲಾಗುಸ ಚಕ್ಕಿ ಸಾಲಾಕಿಲ್ಲ;— ಅಷ್ಟು ಜನರು ಬಲೀ ಬಿದ್ದಾರ ಈ ದೇಶದ ಜಗಳದದಶಿಂದ! ಅದರೊಳಗ, ಕೂಸು, ಕುನ್ನಿ, ಹುಡು ಗರು, ಹುಡಿಗೇರು, ಹೆಂಗಸರು, ಹರೇದವರು, ಮುದುಕರು, ತದ ಕರೂ ಎಷ್ಟೆಷ್ಟು ಜನರು!!! ಅದರೊಳಗ ಊನಾದವರೆಷ್ಟು? ಪ್ರಾಣಾ ನೀಗಿದವರೆಷ್ಟು!? ಮಾನಾ ಕಳಕೊಂಡವರೆಷ್ಟು!? ಅವ ರೆಲ್ಲಾರದೂ ಹಳ್ಳಿಗೆ ಹತ್ತರಂತೆ ಸ್ಮಾರಕಾ ಕಟ್ಟಿಸಿದರೂ ನಮ್ಮ ಹಿಂದುಸ್ತಾನದ ಹಳ್ಳಿಗಳು ಸಾಲಾಕಿಲ್ಲಾ! ಇದಿರಲಿ; ನನ್ನಂಥವರು ಯಾರಾದರೂ ಅಪ್ಪಿತಪ್ಪಿ ನಿಮ್ಮಂಥವರ ಕೈಯಾಗ ಸಿಕ್ಕರ ಗಂಡ ಸರು ಹೆಂಗಸರು ಅನ್ನದsss, ಬತ್ತಲೆ ಮಾಡಿ. ಚರ್ಮಾ ಸುಲೀತೀರಿ ನೀವು! ಮಾನದ ಸುಲಗೀ ಮಾಡತೀರಿ; ಕೈಕಾಲು ಕಡದು ಗೋಳಾಡಸತೀರಿ; ಹೇಸಿಗಿ ತಂದು ಬಾಯಿಗೆ ಹೀಡೀತೀರಿ; ತಲೀ ಕೆಳಗಮಾಡಿ ತೂಗ ಹಾಕಿ, ಉರೀಹಾಕತೀರಿ; ಹೆಂಗಸರ ಮರ್ಮಾ ದಾಗ ಉರಪು ಹಾಕಿ, ವರ್ಮಾ ತೀರಿಸಿಗೋತೀರಿ; ಅನ್ನೋದೆಲ್ಲಾ

ನಮಗ ಗೊತ್ತೈತಿ. ಈ ಮೂರು ತಿಂಗಳ್ದಾಗಽ ಹಿಂಥಾ ನೂರಾರು ಸಂಗತೀ ನನ್ನ ಕಂಣ ಹುಜರಽ* ನಡೆದದ್ದೂ ಈಗೂ ಕಂಣ ಮುಂದ ಕಟ್ಟಿದ್ಹಾಂಗ ಆದಾವು! ಇದನ್ನೆಲ್ಲಾ ಕಂಣಗಂಡಽ ನಾ ಬಾಯಿ ಬಿಗೀ ಹಿಡದೇನಿ. ಅದಕ್ಕಽ ಹೇಳಿದೆ; ಈ ಎರಗಟ್ಟೀ ಸೀಮ್ಯಾಗಿನ ಎಲ್ಲಾ ಗುಡ್ಡದಕಿಂತಾ ನನ್ನ ಎದೀ ಗಟ್ಟಿ ಐತಿ ಅಂತ. ನನ್ನ, ಗುಂಡು ಹಾಕಿ ಕೊಲ್ಲಿರಿ; ನೂರು ಹೋಳಾಗಿ ಕತ್ತರಿಸಿರಿ; ಆದರ ಈವತ್ತ, ಯಾರನ್ನ ನಾವು ಪಾರು ಮಾಡಾಕ ನಿಂತೀವೋ ಅವರು ಪಾರು ಆಗಾಕಽ ಬೇಕು; ಈವತ್ತಿನ ರಾತ್ರಿ ನಾವು ಹೂಡಿದ ಹಂಚಿಕಿ ನಡಿಯಾಕಽ ಬೇಕು! ಈ ಯರಗಟ್ಟಿಯೊಳಗಿನ ಎಮ್ಮೀಗೊಡ್ಡ ಸಹಿತ ನಿಮಗ ಸುದ್ದೀ ಹೇಳಾಕಿಲ್ಲಾ! ನೀವು ಸುಮ್ಮಾಕ, ಕಲ್ಲಿನ ಗೋಡೆಗೆ ತಲೀ ಹಾಯ್ದ ಹಾಂಗ ಮಾಡೂದರಕಿಂತಾ, ಕೈಯಾಗ ಸಿಕ್ಕೀನಿ, ನಿಮಗೇನು ಮಾಡೋದು ಮಾಡಿಕೊಳ್ರಿ! ನಮಗೇನು ಮಾಡೋದಿದ್ದೀತು, ಅದನ್ನ ನಮ್ಮ ಜನಾ ಮಾಡತೈತಿ!! ಆದರ ಈ ಸೀಮ್ಯಾಗ ಒಂದು ತಲೀ ಬಿದ್ದರ ಒಂಬತ್ತು ತಲೀ ಚಿಗೀತಾವು ಅನ್ನೋದು ಮಾತ್ರ ನೆಪ್ಪಿರಲಿ, ಅಂದೆ!!

ಸುಪ್ರಿ—(ಅಬ್ಬರದ ಗೊಗ್ಗರ ದನಿಯ ಸಿಡುಕಿನಿಂದ) ಪ, ಏ; ಕಗ್ಗ ಕತ್ತೀ ಮಗನೇ ಕಟ್ಟಿಡು ಇದೆಲ್ಲಾ ಪಂಟು. (ಸಿಪಾಯರಿಗೆ) ಏ. ಇವನ್ನ ಹೊರಗ ಎಳಕೊಂಡ್ಹೋಗಿ ಫೌಜದಾರರ ಕೈಯಲ್ಲಿ ಕೊಡಿರೋ. ಮತ್ತ ನಾ ಮೊದಲೇ ಸಾರ್ಜಂಟ ಸಾಹೇಬರಿಗೆ ಹೇಳಿದ್ಹಾಂಗ ಎಲ್ಲಾ ರೆಡೀ ಮಾಡರೀ ಅಂತಾ ಅವರಿಗೆ ಹೇಳಿರಿ. ಇವರು ಹೀಂಗ ಹಾದಿಗೆ ಬರೋಹಾಂಗ ಕಾಣೋದಿಲ್ಲಾ; ಒಯ್ಯ್ರಿ, ಒಯ್ಯ್ರಿ, ಅವನ್ನ; (ಧ್ಯಾನಿಸುತ್ತ) ಇದಕ್ಕ ಇನ್ನೊಂದು ಉಪಾಯ ಮಾಡಬೇಕು. (ಸೋಲ್ಜರರಿಬ್ಬರೂ ಮಲ್ಲಣ್ಣನನ್ನು ಎಳೆದೊಯ್ಯುತ್ತಿರಲು ಸುಪ್ರಿಯು ಅವನನ್ನು ದಬ್ಬಿ ಕ್ರೂರವಾಗಿ ನುಡುಗುಟ್ಟುತ್ತಲೂ, ಗೌಡನು ಅಸಹಾಯತೆಯ ನೆಟ್ಟ ನೋಟದಿಂದಲೂ ನೋಡುತ್ತಿರುವನು. ಮುದುಕಿ ಸುಪ್ರಿಯನ್ನು ಶಪಿಸುತ್ತಿರುವಳು; ಸೊಸೆ

* ಮುಂದೆಯೇ

ಸಾಗರಬಿದ್ದು ಗಾಗರಿಯಬುವಳು. ಮಲ್ಲಂಣ ದರ್ಪದಿಂದ ಹೋಗುತ್ತ ಕಣ್ಮರೆಯಾದಮೇಲೆ, ಸುಪ್ರಿಯ ಲಕ್ಷ್ಯ ಮುದುಕಿಯ ಒಡನಾಡಿಗಳ ಕಡೆಗೆ ಹೋಗುವದು. ಅವಳನ್ನು ಒಮ್ಮೆ ದುರುಗುಟ್ಟಿ ನೋಡಿ ಕೈ ಹಿಂದೆ ಕಟ್ಟಿಕೊಂಡು ಯೋಚನಾಪರನಾಗಿ ಒಂದೆರಡು ಸಲ ಸುತ್ತಾಡುವನು. ಕೊನೆಗೆ ಏನೋ ವಿಚಾರಕ್ಕೆ ಬಂದವನಂತೆ......) ಇಲ್ಲಿ ನೋಡಿರಿ ಗೌಡರೇ. ಇವರೆಲ್ಲಾ ತಲೆ ತಿರುಕ ಹುಂಬರು. ಸುಮ್ಮಸುಮ್ಮನೆ ಯಾರೋ ಹೇಳಿದ ನಾಲ್ಕು ಮಾತು ಕೇಳಿಕೊಂಡು ಜಿಗದಾಡತಾವ! ಆದರ ಈ ಆಸಾಮಿ ನಮಗ ಆಸಗೊಳ್ಳುವಂತಿಲ್ಲ; ಇವಕ್ಕೇನೋ ದೇಶಂತs, ಸೇವಾ ಅಂತ; ನಾವು ಮಾಡೋದೂ ಒಂದು ದೇಶಸೇವಾ ಅಂತs ತಿಳೀರಿ! (ಮುದುಕಿ ಸಿಟ್ಟಿನಿಂದ ಅವನ ಕಡೆಗೆ ಉಗುಳಿ "ನಿನ್ನಂಥವರು ಹಾರಗೆಟ್ಟು ಹೋಗೋದು ಎಲ್ಲಾಕಿಂತ ಹೆಚ್ಚಿನ ದೇಶಸೇವಾ" ಎಂದು ಉದ್ಗರಿಸುವಳು. ಸುಪ್ರಿಯು ಹಿಂದಿರುಗಿ ಮತ್ತೊಮ್ಮೆ ಅವಳನ್ನು ದುರುಗುಟ್ಟಿ ನೋಡಿ ಮಾತು ಮುಂದುವರಿಸುವನು.) ಇಕಾ ರಾಘಪ್ಪಗೌಡರೇ, ಈ ನಾಲ್ವತ್ತೊಂದು ವರ್ಷದ ಅನುಭವದೊಳಗ— ಬಿಸೀಗೆ ಬೆಂಣಿ ಕರಗೇ ಕರಗತೈತಿ ಅಂತ ಮನಸಿಗೆ ಖಾತ್ರಿ ಆಗಿ ಬಿಟ್ಟsದ! ಅಲ್ಲಾ ಹಸರು ನೋಟಿನ ಹಸಿವು ಹಚ್ಚಿದರ ಮುಂದ ದಾರಿ ತೆರದ ಹಾಗೇ ಅನ್ನರಿ.

ರಾ. ಗೌಡ್ರು— (ವಿಚಾರಪರತೆಯಲ್ಲಿಯೇ ಮೆಲ್ಲಗೆ ತುಟಿಬಿಚ್ಚಿ) ಆಗಳೇ ಮಲ್ಲಂಣ ಅಂದಹಾಗ, ವರ್ಷಕ್ಕs ಅನುಭವಕ್ಕs ಮೇಳ ಇಲ್ಲಾ ಅಂತ ಕಾಣತೈತಿ. ನೀವಿಷ್ಟು ಅನುಭವ ಪಡದರೂ ಹಳ್ಳೀ ಜನರ ಮನಸು ಕಂಡಿಲ್ಲ ಬಿಡ್ರಿ.

ಸುಪ್ರಿ— ಅಂದರೇನು, ನಿಮ್ಮ ಮಾತಿನ ಅರ್ಥಾ ರಾಘಪ್ಪಗೌಡರ?

ರಾ. ಗೌಡ್ರು— ಇಲ್ಲಿ ನೋಡ್ರಿ, ಹಳ್ಳೀ ಜನರ ಮನಸು ಒಳ್ಳೇದಕ್ಕ ಬೆಂಣೀಕಿಂತಾ ಮಿದುವು; ಕೆಟ್ಟದಕ್ಕ ಕಲ್ಲಿನಕಿಂತಾ ಕಠಿಣಾ! ಈ ಜನರು ಹೀಂಗ ಹಣದ ಆಶೇಕ್ಕ ಮಣಿಯುವವರಲ್ಲ ಬಿಡ್ರಿ.

ಸುಪ್ರಿ— ಯಾಕs—ಗೊತ್ತಿಲ್ಲೇನು? ಹಣಾ ಅಂದ್ರ ಹೆಣಾ ಬಾಯಿ ತೆರದೀತನ್ನೋದೂ!

ರಾ. ಗೌಡ್ರು— ಆದರ, ಅಂಥಾ ಹೆಣಾ ಹಳ್ಳಿಯೊಳಗ ಸಿಗೋದು ಅಪರೂಪ

ಬಿಡ್ರಿ. ಪಟ್ಟಣದೊಳಗ, ಆದರೊಳಗ, ಕಲಿತವರೊಳಗ, ಆದರೊಳಗೂ ಯಾವದಾದರೂ ಹುದ್ದೇವೊಳಗ ಇದ್ದಾವರಲ್ಲೆ, ಅಂಥಾ ಹೆಣದ ಗುಣಾ ಹೆಚ್ಚು ನೋಡ್ರಿ.

ಸುಪ್ರಿ— ನೋಡೀರೆಂತ ಗೌಡ್ರ! ಪಾಪ ಬಡ ಮುಂಡೇಮಕ್ಕಳಿವು; ಉಂಡುಟ್ಟ ಸುಖಾ ಪಟ್ಟು ಇವಕ್ಕೇನು ಗೊತ್ತು? ಒಮ್ಮೆ ಆ ಸುಖದ ಬೆನ್ನು ಹತ್ತಿಸಿದರ ಇವರೂ ಕೈಯಾಗಿನ ಗೊಂಬಿ ಆಗತಾರ, ಗೊಂಬಿ!

ರಾ. ಗೌಡ್ರು— ಹಾಂಗ ಗೊಂಬಿ ಆದವರ ಸುಖಾ ಕಂಣೆದುರಿಗೆ ಕಾಣತೈತಿ ಬಿಡರಿ. ಆದರ, ಅದೂ ಸುಖಾ ಅಲ್ಲರೀ; ಸುಖದ ಭೂತಾ!

ಸುಪ್ರಿ— ಭೂತೋ ದೆವ್ವೋ ಆದೊಮ್ಮೆ ಇವರಿಗೆ ಬಡೀಬೇಕು, ನೋಡ್ರಿ. (ಅದಕ್ಕೆಲ್ಲಾ ತಾವು ಸೊಪ್ಪು ಹಾಕುವವರಲ್ಲೆಂಬಂತೆ ಮುದುಕಿ ಅವನ ಕಡೆ ಕೈ ಮಾಡಿ ಲಟಿಕು ಮುರಿಯುವಳು. ಅದನ್ನು ನೋಡಿ) ಏ, ಆ ಮುದಿಕಿನ್ನ ಇತ್ತಲಾಗ ತಂದು ನಿಂದರಸರ್ರ್ಯೋ. (ಆತನು ಪುತ್ತೆ ಬಾಕಿನಮೇಲೆ ಕೂಡಲು ಸಿಪಾಯಿಯು ಮುದುಕಿಯನ್ನು ಎದುರಿಗೆ ತಂದು ನಿಲ್ಲಿಸುವನು.) ಎಬೇ ಮುದಿಕಿ, ಇಕಾ ನೋಡು; ನಿನಗ ನಮ್ಮ ಮ್ಯಾಲೆ ಸಿಟ್ಟು ಬಂದೈತಿ; ಆದೇನೋ ವಾಜಮೀನ* ಅನ್ನು. ಯಾಕಂದ್ರ, ಎಷ್ಟೇ ಅಂದ್ರೂ ಮಗನ ಮ್ಯಾಲೆ ಪೇಚು‡ ಬಂದೈತಿ, ಅಂದರ ಯಾವ ತಾಯಿಗೂ ತಳಮಳಾ ಆಗಾಕs ಬೇಕೇನವಾ. ನಮಗೂ, ನಿನ್ನ ಕೈಗೆ ಬಂದ ಮಗಾ ಕೆಟ್ಟದಾರೀ ತುಳೀಬಾರದೂ ಅನ್ನಸತೈತಿ. ಅದಕ್ಕs ಆತಗ ಬೇಕಾವಷ್ಟು ತಿಳೀ ಹೇಳಿದರೂ, ಮಂದೀಮಾತು ತಲೀಯೊಳಗ ಹಾಕ್ಕೊಂಡು, (ಹೊರಗಡೆಗೆ ಬೆರಳು ತೋರಿಸಿ) ಈಗ, ಅಕಾ, ಸಾವಿನ ಎದುರಿಗೆ ನಿಂತಾನ. ಈ ಹರೇದ ಹುಡುಗರ ಹುಚ್ಚು ಹೀಗs ನೋಡಬೇ! ನನಗೂ ಒಬ್ಬ ಮಗಾ ಇಂಥವನೇ ಇದ್ದಾನು. ಆಯ್. ಸಿ. ಎಸ್. ಅಥವಾ ಬ್ಯಾರಿಸ್ಟರಿಕೀಗೆ ಕಳಿಸಬೇಕೂಂತ ಮಾಡಿದ್ದೆ. ಆದೆಲ್ಲಾ ಬಿಟ್ಟು ಹರಿಜನ ಉದ್ಧಾರಾ ಮಾಡತೀನಿ ಅಂತ ಮನೀ ಬಿಟ್ಟು ಓಡಿ ಹೋಗಿ ನಾಲ್ಕು ವರಸ

* ಯೋಗ್ಯ; ‡ ಸಂಕಟ

ಆದ್ರೂ ಏನವಾ. ಈ ಹುಡುಗ ಮುಂಡೇವು ಹೀಂಗs, ಅನ್ನು. ನೀ ಮುದಿಕೀ, ನನ್ನ ಕಿಂತ ಅನುಭವದಾಕಿ; ಎಲ್ಲಾ ತಿಳಿದಾಕಿ! ನೀನs ಅಷ್ಟು ಇದ್ದ ಹಕ್ಕೀಕತ್ತು ಇದ್ದಕಿದ್ದಹಾಂಗs ಹೇಳಿ ಬಿಡು ಅಂದ್ರ ನಿನ್ನ ಮಗನೂ ಬದಕತಾನೂ, ಮ್ಯಾಲ ನಿನ್ನ ಕುಟುಂಬಕ್ಕ ಕಡೆ ತನಕ ಕಲ್ಯಾಣ ಆಗೂಹಂಗ ಮಾಡತೀನಿ.

**ಮುದುಕಿ—** (ಸ್ವಲ್ಪ ಮುಂದರಿದು) ಅಂದರೇನು? ಒಂದ ಉಂಬಳಿ ಜಾಗೀರು ಹಾಕಿಕೊಡತೀ ಏನು?

**ಸುಪ್ರಿ—** (ಆತುರತೆಯಿಂದ) ಅದಕ್ಕೇನಬೇ ಮುದಿಕಿ; ಸರಕಾರ ದಯಾ ಮಾಡಿದರ, ಹತ್ತು ಕೂರಿಗಿ ಜಮೀನು ಸಿಕ್ಕೀತಂತs ತಿಳಿ!

**ಮುದುಕಿ—** ಅಯ್ಯ ನಿನ್ನ ಹತ್ತು ಕೂರಿಗೀ! ಥೂ (ಉಗುಳಿ) ಈಗ ಸಾವಿರ ಹಳ್ಳೀ ರಾಣಿ ಇದ್ಹಾಂಗ ಅದೀನೋ* ನಾನು!! ಘಟಪ್ರಭಾ ಮಲಪ್ರಭಾ ನದೀ ನಡುವಿನ ನಾಡೆಲ್ಲಾ ನಾ ಏಳಂದ್ರ ಏಳತೈತಿ; ಕುಂದರು ಅಂದ್ರ ಕುಂದರತೈತಿ! ಈಗ ನೀನs ನಮ್ಮ ನಡುವ ಸಿಕ್ಕೀ; ಜೀವಂತ ಪಾರಾಗೋ ಹಂಚಿಕೀ ನೋಡಿಕೋ! ಈವತ್ತ ನಮ್ಮ ಜನರೆಲ್ಲಾ ಜವಾಬದಾರೀ ಕೆಲಸದ ಮ್ಯಾಲ ಹೋಗಿರದಿದ್ದರ, ನಿನ್ನ ಮ್ಯಾಗ ಇಷ್ಟೊತ್ತಿಗೆ ಹುಲೀ ಹಾರಿದ್ಹಾಂಗ ಹಾರತಿದ್ದರು!

**ಸುಪ್ರಿ—** ಅದೆಲ್ಲಾ ಕನಸಿನ ಮಾತು ಬಿಡು ಮುದಿಕೀ! ಈಗೇನವ್ವಾ ಅಂದ್ರ, ನಾ ಹೇಳಿದ್ಹಾಂಗ ಕೇಳು; ಬೇಕಾದರ ಹಣಾ ಕೈಯಾಗ ಎಣಿಸಿಕೋ; ಒಮ್ಮೆ ಈ ಶಿವನಿಂಗಪ್ಪನ ಮ್ಯಾಗ ವಿಶ್ವಾಸ ಇಟ್ಟ ನೋಡು.

**ಮುದುಕಿ—** ನಾ ಒಬ್ಬ ಶಿವನ್ನ ಬಲ್ಲಿನೇ ಹೊರ್ತು, ಇಲ್ಲದ ನಾಗಪ್ಪಾ ಮೂಗಪ್ಪಾ ಯಾರನ್ನೂ ನಂಬೂವಾಕಿ ಅಲ್ಲಾ; ತಿಳೀತs!

**ಸುಪ್ರಿ—** ಹಾಂ! ಆ ಶಿವನ ದಯದಿಂದs ನಿನ್ನ ಮಗನೂ ಉಳಕೋತಾನ! ಮಗನ ಕಡೇ, ಅವನ ಮುಂದಿನ ಸಂಸಾರದ ಕಡೇ, ಲಕ್ಷ ಇಟ್ಟ ನಮಗ ಸುದ್ದೀ, ಕಡೀಕೆ, ಒಂದ ಸೊನ್ನಿ, ಹೇಳಿಬಿಡು!

---
* ಇರುವೆನೋ

ನಿಮಗೆ ಯಾರಿಗೂ ತ್ರಾಸ ಆಗಲಿಕ್ಕಿಲ್ಲ; ನಿನ್ನ ಮಗನನ್ನೂ ಬಿಟ್ಟು ಬಿಡತೇವಿ. ಗೌಡ್ರ, ಮತ್ತೀಗ ಮುದಿಕಿಗೆ ಒಂದ ನೂರು ರೂಪಾಯಿ ತೆಗೆದು ಕೊಡ್ರಿ. ನಾಳೆ ಮತ್ತ ಇನ್ನೂರು ರುಪಾಯಿ ಕಳಿಸಿಕೊಡ್ರಿ. (ಗೌಡರು ಅಲ್ಲಾಡುವದೇ ಇಲ್ಲ)

ಮುದುಕಿ— (ರೊಚ್ಚಿನಿಂದ) ಇಕಾ, ನೀ ನಮ್ಮ ಜನರ ಕೈಯಿಂದ ಪಾರಾಗಿ, ದೇವರ ಇಚ್ಛಾದಿಂದ ಸತ್ತೀ ಅಂದ್ರ, ಆಗ ನಿನ್ನ ಹೆಣಾ ಚಂದಃ ಮಾಡಾಕ ಇಟ್ಟಕೋ ನಿನ್ನ ಆ ಹಸಿರು ನೋಟನ್ನ! ಇನ್ನ ನಮ್ಮ ನಸೀಬದಿಂದ, ನಮ್ಮ ಕೈಯಾಗs ಸಿಕ್ಕು ನೀ ಸತ್ತರ, ನಿನ್ನ ಸಿದಿಗಿ ಕಟ್ಟಿಸಿ ಚಟಕದ ಪಲ್ಲಕ್ಕೀ ಸಿಂಗಾರ ಮಾಡ್ಸಾಕ ನಾನs ಐನೂರ ರುಪಾಯಿ ಖರ್ಚ ಮಾಡತೇನ ನನ್ನ ಕೈಯಿಂದ!

ಸುಪ್ರಿ— (ಅತಿ ಕೋಪದಿಂದ ಒಮ್ಮೆಲೆ) ಏ. ಮುದಕ ಮುಂಡೇಮಗಳ!! ಎಚ್ಚರಾ!! ನಿನ ನಿನ ನಿನs!! ಏನ ಮಾಡೇನು ಅಂತ ತಿಳದೀ!! ಅಂ! ಅಂ! ಅಂ!

ಮುದುಕಿ— ಅವಕೆಲ್ಲಾ ನನ್ನ ಮಗಾ ಉತ್ತರಾ ಕೊಟ್ಟs ಹೋಗ್ಯಾನ ಬಿಡು! ಅತ್ತಾಗ ಕೊಲ್ಲಾಪುರದ ಕಡೆ, ನಿನ್ನಂಥವನೇ ಒಬ್ಬ ಪಿಕ ನಾತಿ ನಮ್ಮಿಬ್ಬರು ಹಣಬರ ಹೆಂಗಸರಿಗೆ ಏನ್ಮಾಡ್ಯಾನನ್ನೋದು ನಾ ಬಲ್ಲೆ. ನೀ ಮಾಡೋದು ಮಾಡಿಕೋ; ನೋಡೋಣ! ಆದರ, ನಿನ್ನ ಮನ್ಯಾಗಿನ ಹೆಂಗಸರ ನೆನಪಿಟ್ಟುಕೊಂಡು ಮಾಡು.

ಸುಪ್ರಿ— (ಏನೂ ತಿಳಿಯದ ಮೂಢ ಗೂಢ ಕೋಪದಿಂದ) ಹಾಂ. ಹಾಂ ನೀನೂ ಅಂಥವಳೇ ಅಂದಹಾಗಾಯಿತನ್ನು! ಅಲ್ಲಾ, ಇನ್ನೊಂದು ಗಳಿಗಿ ನೀ ಹೀಂಗs ಮಾಡಿದರ ನಿನ್ನ ಮಗನ ಅವಸ್ಥೆ ಏನಾದೀತು ಅನ್ನೋದರ ಎಚ್ಚರಾ ಅದ ಏನು ನಿನಗೆ? ನೋಡಲ್ಲೆ ನೋಡು; ನಿನ್ನ ಮಗನ ಎದೀಗೆ ಗುಂಡು ಆನಿಸಿ ನಿಂತಾರ ನಾಲ್ಕು ಮಂದಿ ಸೋಲ್ಜರ ಜನರೂ! ನಾ ಸೊನ್ನೇ ಮಾಡೋದೊಂದೇ ತಡಾ! ಅಂ! ಏನಂತಿ? (ಮುದುಕಿಯು ತನ್ನ ಮುಖದಲ್ಲಿ ಯಾವ ಭಾವವ್ಯತ್ಯಾಸವೂ ಕಾಣ ಬಾರದಂತೆ ಮುಖದ ನರಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಉದಾಸೀನತೆಯ ಹೆಮ್ಮೆಯಿಂದ ನಿಲ್ಲುವಳು. ಸೊಸೆ ಮಾತ್ರ ಗಾಬರಿಯಿಂದ ಬಾಯಲ್ಲಿ ಎಡದೂ ಕಿರಿ

ಬೆರಳು ಕಚ್ಚಿ ಅಯ್ಯೋ ಎಂದು ಚೀರುವಳು. ಗೌಡರು ಹುಬ್ಬು ಇಳಿಸಿ ಅವುಡು ಗಚ್ಚಿ ನಿಲ್ಲುವರು.)

ಮುದುಕಿ— ನನ್ನ ಮಗನ ಸಾವಿನ ಕನಸೂ, ಆದ್ಯಾಕ ಅನುಭೋಗ ಸಹಿತ, ನಾ ಇದಕ್ಕೂ ಮೊದಲೇ ಎಷ್ಟೋಸಲ ಪಡದು, ಮನಸಿಗೆ ದಡ್ಡು ಬಿದ್ದೈತಿ. ಹಿಂಥಾದಕ್ಕ ನಾಯೇನು ಜಪ್ಪ ಅನ್ನಾಕಿಲ್ಲ! ನೆಪ್ಪಿಟ್ಟುಕೋ!

ಸುಪ್ರಿ—(ದನಿ ಬದಲಿಸಿ) ಗೌಡ್ರ, ಈ ಮಾತೂ ಒಬ್ಬ ಹೆಂಗಸಿಗೆ, ಆದರಲ್ಲೂ ಒಬ್ಬ ಅನುಭವಸ್ಥ ಮುದಿಕಿಗೆ, ಹಡದ ತಾಯಿಗೆ, ಒಪ್ಪೂದಿಲ್ಲ, ನೋಡ್ರಿ! ಅಲ್ಲಾ, ಒಂಭತ್ತು ತಿಂಗಳು ಹೊತ್ತು ಹಡದು ದೊಡ್ಡದು ಮಾಡಿದ ಕೂಸರೀ! ಅಂಥಾ ಹುಡುಗ ಸಾವಿನೆದುರಿಗೆ ನಿಂತಾಗ, ತಾಯಿ ಅನ್ನುವಾಕಿ ತಡಕೊಂಡಾಳೇನ್ರೀ! ಇದೇ ಹುಡುಗ ಸಣ್ಣಾವ ಇದ್ದಾಗ ಸ್ವಲ್ಪು ಕತ್ತಲಿಯೊಳಗಿಂದ ಹೆವರಿ ಓಡಿ ಬಂದರ ತನ್ನ ಸೆರಗಿನಲ್ಲಿ ಮುಚ್ಚಿಕೊಂಡು ಸಮಾಧಾನ ಮಾಡಿದ ತಾಯಿ! ಈಗ ನೋಡಿಪರ ಕಡೇ ಕತ್ತಲಿ ನುಂಗಲಿಕ್ಕೆ ನಿಂತsದ ಅದೇ ಈಕೀ ಕುಸಿನ್ನ!.... ಯಾವ ಕೂಸಿನ ದಸಿಂಡ ಮಳೀ ಗಾಳಿ ತಂಡೀ ಬಿಸಲೂ ಅಂತ ಯಾವಾಕಿ ಅಸರಂತ ಚಿಂತಿ ಮಾಡತಿದ್ದಳೋ ಆ ತಾಯಿ ತನ್ನ ಮುದ್ದಿನ ಕೂಸಿನ್ನ ಇವೊತ್ತಿನ ಭಯಂಕರ ಕಗ್ಗತಲೆಯ ರಾತ್ರೀದಿನಾ, ಇಂಥಾ ಜಡಿಮಳಿ, ಬಿರುಗಾಳಿಯೊಳಗ ಯಮಲೋಕದ ಯಾತ್ರಿಗೆ ಹೋಗಗೊಟ್ಟಾಳೇ ಎಂದಾದರು? ಹುಡುಗ ದೊಡ್ಡದಾಗಿ ಕೈಗುಟುಕಿಗೆ ಬರೋತನಕಾ ಯಾರು ಎಲ್ಲಿ ಹೊಡದಾರೋ, ಎಲ್ಲಿ ಹುಡುಗಾ ಬಿದ್ದೀತೂ ಎದ್ದೀತೂ, ಎಲ್ಲಿ ಪೆಟ್ಟು ತಿಂದೀತು ಅಂತ ಹಗಲು ರಾತ್ರಿ ಡವಾ ಡವಾ ಅಂದ ತಾಯೀ ಎದೀ, ಕಣಗಂಡೂ ಇವತ್ತ ಮಗಾ ಗುಂಡಿಗೆ ತುತ್ತಾಗುವಾಗ ಹ್ಯಾಗೆ ತಡೆದುಕೊಂಡೀತು ಗೌಡರೇ! ಎಷ್ಟೆಂದರೂ ತಾಯೀ ಕರಳು! ಒಬ್ಬನೇ ಒಬ್ಬ ಗಂಡುಸುಮಗಾ! ಕುಲದ ಬಳ್ಳೀ ಕುಡಿಯಂಥಾ ಕೂಸು! ತುಂಬಿದ ಹರೇ; ತುಂಬಿದ ಮೈ; ನಾಳೆ ಅದು ನಾಯಿ ನರೀ ಪಾಲಾದದ್ದು ಒಬ್ಬ ತಾಯೀ

ಕಂಣು ಹ್ಯಾಗೆ ನೋಡ್ಯಾವು ಗೌಡರೇ; ಹ್ಯಾಗೆ ನೋಡ್ಯಾವ್ರ! ಎಂಥಾ ಮಗಾ! ಎಂಥಾ ಮಗಾ!!

ಮುದುಕಿ— (ವಾತ್ಸಲ್ಯದ ಮೈಮರೆವಿನಿಂದ) ಮಗಾ! ಹೌದು ನನ್ನ ಮಗಾ! ನನ್ನ ಮುದ್ದಿನ ಕೂಸು ಹೌದು! ಹೌದು........ಆದರs.... (ಎಚ್ಚತ್ತು ಆಕ್ರೋಶದಿಂದ) ಏ, ಚಂಡಾಲಾ, ನನ್ನ ಮಗಾ ಏನು ಅಂಥಾ ತಪ್ಪು ಮಾಡ್ಯಾನs?

ಸುಪ್ರಿ— ಗೌಡರs ಈಕೀ ಮಗಾ ಮತ್ತ ಆವನ ತಂಡದವರು ಕೂಡಿ ಮಾಡಿದ 'ಗುನ್ಹೆ'*ಗಳ ಗುಣಾಕಾರಾ ಆಷ್ಟು ಈಕೀಗೆ ಓದಿ ಹೇಳ್ರಿ! ಏ ಮುದುಕೀ! ಸರಕಾರಾ ಡಬ್ಬಾ ಹಾಕಬೇಕಂತ ಹೂಡಿದ ಬಂಡು ಏನು ಕಡಮೀ ತಪ್ಪs? ಆದರ ನನ್ನ ಕೇಳಿದರ, ನಿನ್ನ ಮಗನ ಎಲ್ಲಾದರಕಿಂತ ಹೆಚ್ಚಿನ ತಪ್ಪೂ, ತನ್ನ ಹಿತಾ ತನಗ ತಿಳಿಯುದ್ದು; ಮನೀಗೆ ಬಂದ ಲಕ್ಷ್ಮೀನ್ನs ಅಲಕ್ಷಮಾಡಿದ್ದೂ! ಅದಕ್ಕೆ ಯಾರೇನು ಮಾಡೋದು! ತನ್ನ ಪಾಲಿಗೆ ಬಂದದ್ದು ಭೋಗಸ್ತಾನs!

ಮುದುಕಿ— ನನ್ನ ಮಗನ ಕೂದಲಾ ಕೊಂಕು ಆಯ್ತು ಅಂದರ ನೋಡಲಾ, ಬೇಬರಸೀ, ನಿನ್ನ ಏಳು ಕುಲಾ ನಾ ನಾಶಮಾಡ್ತೀನಿ! ಅವಗs ಗುಂಡು ಒಂದ ಹಾಕೂ; ನಮ್ಮ ನಮ್ಮ ಜನರ ದಂಡು ನಿನ್ನ ಖಂಡಾನs ಹಿರೀತಾರs! ನೀ ನಿನ್ನ ನಾಲ್ವತ್ ವರ್ಷದ ನೌಕರೀಯೊಳಗ ಮಾಡಿದ ಪಾಪಗಳಿಗಿಂತ ಹೆಚ್ಚಿನ ಪಾಪ ನಿನಗ ಬಡದೂ, ನಿನ್ನ ಹೆಂಡರೂ, ಮಕ್ಕಳೂ, ನಿನ್ನ ಎದುರಿಗೇ ನಿರ್ನಾಮ ಆಗಿ ಕಡೆಗೆ ನೀನೂ ಸಿಡಿದುಹೋದೀ! ಎಲ್ಲಿ ಹೋದರೂ ನಿನಗೆ ಒಂದು ಮುಕ್ಕು ಕಾಳೂ, ಒಂದು ಕಾಳು ನೀರೂ, ಸಿಗದ ಹಾಗ ಆದೀತು! ದೇಶದ ಜನರೆಲ್ಲಾ ನಿನ್ನ ಕಂಡರs, ಮುಕಾ ತಿರುಗಿಸಿ ನೀ ಹೋದ ಹಾದೀ ಮೈಲಿಗಿ ಅಂತ ತಿಳಿದಾರು! ನಾಳೆ ನಮ್ಮ ದೇಶ ಸ್ವತಂತ್ರ ಆದಮ್ಯಾಗ ನಿಮ್ಮಂಥವರ ಹುಲ್ಲು ಗೊಂಬೀ ಮಾಡಿ ಕತ್ತೀಮ್ಯಾಲ ಮೆರೆಸೀ ಮಚ್ಚೀಲೆ ಹೊಡದೂ, ಥೂ ಥೂ ಉಗುಳಿ ದರವರ್ಷ ಕಾಮಣ್ಣನ ಹೋಳಿ ಮಾಡಿದ್ಹಾಂಗ ನಿನ್ನ

---

* ಅಪರಾಧ

ಹೋಳೀನು ಮಾಡ್ಯಾರು! ನಾ ಹೋದೇನೂ; ನನ್ನ ಮಗಾ ಹೋದಾನು; ಆದರ ಜನರ ರೊಚ್ಚು ಹೋಗಾಕಿಲ್ಲಾ; ಆದರ ಸಿಚ್ಚ್ಯಾ ನಿನ್ನ ಸುಡದೇ ಬಿಡಾಕಿಲ್ಲಾ! ತಿಳಿದು ನೋಡು ಒಂದೀಟು! ಹತ್ತು ಜನರ ತಳತಳಾ ಅನಿಸಿದಾವಾ ಪಾತಾಳಕ್ಕs ಹೋದಾನು! ಈಗಾದರೂ ಕಣ್ತಗೀ! ನಿನ್ನ ನೌಕರೀ, ಈ ನಿನ್ನ ಹುದ್ದೇ, ನಿನ್ನ ಜಂಭಾ, ಇವೆಲ್ಲಾ ಇಳಿಹೊತ್ತಿನ ಬಿಸಿಲು ಇದ್ಧಾಂಗ ಆದಾವೋ ಇಳಿಹೊತ್ತಿನ ಬಿಸಿಲೂ! ಅದನ್ನ ನೆಚ್ಚೀ ಹುಚ್ಚಾಗಬ್ಯಾಡ! ನಾಳೆ ಪಿಂಚಣೀ* ಆಗಿ, ಹರಕ ಮಂಚ್ಕೀ ತಿಪ್ಪಿಗೆ ಒಗೆದಹಾಗೆ ಸರಕಾರ ನಿನ್ನ ಒಗದಮ್ಯಾಲೆ, ನಿನ್ನ ಕೈಮ್ಯಾಗ ಉಚ್ಚೀ ಹೊಯ್ಯೋರು—ನಾವು—ಜನರೂ—ಸರಕಾರ ಅಲ್ಲಾ; ಆದರ ನೆಪ್ಪಿಟ್ಟುಕೊಂಡು ಮಾತಾಡೋ ನನ್ನ ಜೋಕುಮಾರಾ!

ಸುಪ್ರಿ— (ಉರಿದೇಳುವನು; ಕೈ ತತ್ತರಿಸುವವು; ಮೈಯೆಂತ ಮೈಯೆಲ್ಲ ಸಿಟ್ಟಿನ ನಡುಕ; ನಶ್ಯದ ಡಬ್ಬಿ ಕೈಜಾರಿ ಬೀಳುವದು) ಏ ಶಟವೀ ತಾಯಿ! ಮುಚ್ಚು ಬಾಯಿ ನನ್ನ ಎದುರಿಗೆ ಮುಕಾಮ್ಯಾಲ ಮಾಡಿ ನಿಂತ ಗಂಡಸು ಸಿಗಾಕಿಲ್ಲಾ; ನಿಂದು ಇಷ್ಟs ಜಿಗದಾಟs!—ನಿಲ್ಲು—ನಿಲ್ಲು—ನಿನ ನಿನ, ನಿನs.... ಮೊದಲು ನಿನಗೇ ಗುಂಡು ಹಾಕ್ತೇನಿ (ಪಿಸ್ತೂಲಿಗೆ ಕೈ ಹಾಕಿ—ಮುದುಕಿ ಮಿಟ್ಟ ಮಿಸುಕದಿರಲು—ಅದನ್ನಲ್ಲಿಗೇ ಬಿಟ್ಟು)...ಅಥವಾ, ಮೊದಲ, ನಿನ್ನ ಕಣ್ಣೆದುರಿಗೇ ನಿನ್ನ ಮಗನ ದಿಂಡು ನೆಲಕ್ಕುರುಳಿಸಿ ನಿನ್ನ ಕರಳು ಕಲಾಕಲಾ ಆಂದಮ್ಯಾಲೆ ನಿನ್ನ ಪೂರಾ ಸಮಾಚಾರ ತಗೊಳ್ಳೋದು ಸರಿ! ಏ! (ಸಿಪಾಯಿಗೆ) ಈಕಿನ್ನೂ ಅಲ್ಲೀ ಹೊರಗ ಎಳಿದೊಯ್ದು ನಿಲ್ಲಿಸರೋ (ಸಿಪಾಯರು ಅವಳನ್ನು ಎಳೆದೊಯ್ಯುತ್ತಿರುವರು)

ಮುದುಕಿ— (ಹೋಗಹೋಗುತ್ತ)—ಇಕಾ, ಗುಡಮಾದಿಗನಂಥವನೇ! ನಮ್ಮನ್ನ ಕೊಂದ ಪಾಪಾ, ನಾ ಕೊಟ್ಟ ಶಾಪಾ ಎರಡೇ ಖರೇ ಆದಾವs ಹೊರ್ತು ನೀ ಎಷ್ಟು ತಿಪ್ಪರಲಾಗಾ ಒಗದರೂ, ನಿನಗ ಬೇಕಾದವರು ನಿನ್ನ ಕೈಯನಾಗ ಸಿಗಾಕಿಲ್ಲಾ; ಇವೊತ್ತು ಸುಡಬೇಕಾದ ಸ್ಟೇಶನೂ

*ಪೆನ್‌ಶನ್

ಬೂದಿಯಾಗವ ಬಿಡಾಕಿಲ್ಲಾ; ಸೆರಗಿಗೆ ಗಂಟು ಹೊಡಕೋ!
(ಅವಳನ್ನೂ ಎಳೆದೊಯ್ಯುವರು.)

ಸುಪ್ರಿ— ಆಗಲಿ, ಆಗಲಿ, ಬಾದಾಮಿ ಗುಡ್ಡದಿಂದ ಗೋಕಾವೀ ಗಟ್ಟದ ವರೆಗೆ, ಆವರು ಎಲ್ಲಿದ್ದರೂ ಹಿಕ್ಕಿಹಿಕ್ಕಿ ಹುಡುಕಿ ತೆಗೆಯಲಿಕ್ಕೇ ಬೇಕು; ಸರಿರಾತ್ರಿ ಮೀರಲಿಕ್ಕೆ ಬಂತು. ಆದರ ರಾಘಪ್ಪಗೌಡ್ರs, ನಾವು ನಿಮ್ಮಮ್ಯಾಲೆ ಈ ಕೆಲಸದೊಳಗ ವಿಶ್ವಾಸ ಇಟ್ಟೇವಿ; ನೀವು ಮಾತ್ರ ಮೊದಲಿನಿಂದ ನೋಡ್ತೀನಿ, ಈ ಸರಕಾರೀ ಕೆಲಸ ದೊಳಗ ಮನಸೇ ಇಲ್ಲಧಾಂಗಿದ್ದೀರಿ ಅನ್ನೂದು ನನ್ನ ಲಕ್ಷಕ್ಕೆ ಬರದೇ ಹೋಗಿಲ್ಲಾ. ಇಲ್ಲಿ ಕೇಳ್ರಿ; ನೀವು ಪೋಲೀಸ ಪಾಟೀಲರು. ನೀವು ಬ್ರಾಮ್ಹಣರಾದರೂ, ಇಲ್ಲೀ ಗೌಡಾ ಸರಕಾರಕ್ಕ ವಿರುದ್ಧಾಗಿ ಸೆರೆಮನೆಗೆ ಹೋದ್ದರಿಂದ ಹೊಸದಾಗಿ ನಿಮ್ಮನ್ನ ನೇಮಿಸಿದ್ದು ಮರೀಬ್ಯಾಡರಿ! ಈ ಜನರ ಕಕಲಾತಿಗೆ ಬಿದ್ದು ನಿಮ್ಮ ಶಕಲಾತೀ ಕಳಕೊಳ್ಳಬ್ಯಾಡ್ರಿ! ನಿಮ್ಮದೂ ವಯಸ್ಸು ಚಿಕ್ಕದೇ ಆದರೂ ನಾಲ್ಕು ಜನ ಸಾಹೇಬರ ಸಂಗತೀ ಫಲಾ ಸಿಕ್ಕಿದ್ದರ, ನಿಮ್ಮ ತಲೆಯಾಗ ಈ ಹರೇದ ಹುಡುಗರ ಹುಚ್ಚಿನ ಹುಳ ಸುಳೀತಿದ್ದಿಲ್ಲಾ. ಈಗಾದರೂ ನಿಮ್ಮ ರೊಟ್ಟಿ ತುಪ್ಪದಾಗ ಬೀಳೋ ಉಪಾಯ ನೋಡ್ರಿ!

ರಾಘಪ್ಪಗೌಡ್ರು— ಸಾಹೇಬರs, ನನ್ನವೂ ಎರಡು ಹೇಳೋ ಮಾತು ಅವೆ!

ಸುಪ್ರಿ— ಇರ್ಲಿ, ಇರ್ಲಿ, ಸ್ವಲ್ಪ ದಮ್ಮ* ಹಿಡೀರಿ; ನನ್ನ ಮಾತು ಪೂರಾ ಕೇಳ್ರಿ. ಇಂಥಾ ಕೆಲಸದಿಂದ ಸ್ವಾರ್ಥನೂ ಇಲ್ಲಾ ಪರಮಾರ್ಥನೂ ಇಲ್ಲಾ! ಹ್ಹ, ಹ್ಹ, ಹ್ಹ!!

ರಾ. ಗೌಡ್ರು— ಸಾಹೇಬರs! ಸರಕಾರದ ಎದುರಿಗೆ, ಒಂದ ವ್ಯಾಳ್ಯಾ ಈ ಜನರು ಪೂರೋಸಾಕಿಲ್ಲಾ†; ನಾನೂ ಕಬೂಲ‡ ಮಾಡೇನು ಅನ್ನರಿ. ಆವರ ನೀವು ಸರಕಾರದ ಹೆಸರಲೆ ಜನರನ್ನ ನಾಯೀ ಹಂಗ ನಡಸೋ ರೀತಿ ನನಗ ಎಳ್ಳಷ್ಟೂ ಸೇರಿಕಿಲ್ಲ.

ಸುಪ್ರಿ— ಈ ರೀತಿ ಪಾತೀ ಚಿಂತಿ ನನಗs ಸರಕಾರಕ್ಕs ಬಿಟ್ಟುಬಿಡ್ರಿ.

---

* ತಾಳಿರಿ † ತಾಳಲಿಕ್ಕಿಲ್ಲಾ ‡ ಒಪ್ಪೇನು

ಸರಕಾರದ ಉಪ್ಪು ಉಂಡೋ ನೀವು ಹೇಳಿದಷ್ಟು ಕೇಳಬೇಕು, ಅಷ್ಟೇ.

ರಾ. ಗೌಡ್ರು— ಈ ಸರಕಾರದ್ದೂ ನಮ್ಮದೂ ಸಂಬಂಧ ಭಾಳ ಆದ್ರ ಅಜ್ಜ ಮುತ್ಯಾನ ಕಾಲದ್ದು. ಜನರದೂ ನಮ್ಮದೂ ಹತ್ತ್ರಗಡಿ ತಲೆ-ತಲಾಂತರದಿಂದ ಕುಲಕುಲಾಂತರದಿಂದ ನಡೆದು ಬಂದದ್ದು. ಸರಕಾರೇನು ಹೊಳೀ ನೀರಿನಂಗ ಈಗಿದ್ದದ್ದು ನಾಳಿಗೆ ಇರ್ಲಿಕ್ಕಿಲ್ಲಾ; ನಮ್ಮ ನಮ್ಮ ಜನರ ಋಣಾ, ಸೂರ್ಯ-ಚಂದ್ರರು ಇರೋ ತನಕಾ ತಪ್ಪಿದ್ದಲ್ಲಾ. ಜನರನ್ನ ನೀವು ಸಿಕ್ಕ ಸಿಕ್ಕಾಂಗ ನಡಸಿದರ ಅವರ ಫಲಾ ದೆವ್ವ ಬಡಕೊಂಡ್ಹಾಂಗ ಬಡಕೊಂಡೀತು. ಈ ಜನಕ್ಕ ಇರೋದು ಎರಡರ ಹಂಗು—ಒಂದು ಜೀವದ ಹಂಗು, ಒಂದು ಮಾನದ ಹಂಗು. ಅದನ್ನs ತೊರದ ಮ್ಯಾಲ ಯಾತಕ್ಕ ಹೇಸಿ ಏನು ಫಲ?

ಸುಪ್ರಿ— ಗೌಡ್ರs, ನೀವೂ ತುಸಾ ಕನಸಿನ ರಾಜ್ಯದವರೇ ಕಾಣತೀರಿ. ನಿಮಗ ನಾವು ಬುದ್ಧೀ ಹಿಂದಾಗಡೇ ಕಲಸತೀವಿ. ಮೊದಲ ಈಗ ಒಂದ ಕೆಲಸಕ್ಕ ತಯಾರ ಆಗರಿ. ಇದೇ ಈಗ ಅವೆರಡೂ ಹೆಣಾ ಬಿದ್ದ ಮ್ಯಾಲ, ನಮಗs, ಸರಕಾರಕ್ಕs, ಅನುಕೂಲಾಗೂಹಾಂಗ ಪಂಚನಾಮೆ ತಯಾರ ಮಾಡ್ರಿ.

ರಾ. ಗೌಡ್ರು— ಆದ್ರ, ಅವರ ಜೀವಾ ತೊಗೊಳ್ಳೂದು ನಿಮ್ಮ ಅಧಿಕಾರ ದೊಳಗ ಇಲ್ಲಾ. ಈ ಸರಕಾರ ಇನ್ನೂ ಅಷ್ಟು ದಿವಾಳೀ ತೆಗ ದಿಲ್ಲ. ಜನರಿಗೆ ಕಡೆಗೆ ನ್ಯಾಯ ಸಿಗದೇ ಹೋಗಲಿಕ್ಕಿಲ್ಲ. ಆಗ ನಿಮ್ಮ ಫಜೀತಿ ಆದೀತು. ನೀವು ಮಾಡೋದಿದು ಶಿಕ್ಷಾ ಅಲ್ಲಾ; ಕೊಲೆಗಡಕತನ!

ಸುಪ್ರಿ— ಗೌಡ್ರs; ಹೆಚ್ಚಿನ ಕಾರಭಾರಕ್ಕ ಬೀಳಬ್ಯಾಡ್ರಿ, ಹೇಳಿದಷ್ಟು ಮಾಡಿರಿ.

ರಾ. ಗೌಡ್ರು— ಅವರಿಗೆ ಗುಂಡು ಹೊಡೆಯುವದೇ ಆದರೆ ಮೊದಲು ಮರಣದ ವಾರಂಟಿನ ಹುಕುಮು ತೆಗೆಯಿರಿ; ಇಲ್ಲದಿದ್ದರ ನನ್ನ ಹದ್ದಿನೊಳಗ ಈ ಕೆಲಸ ನಡದರ ನಾ ಅಡ್ಡೀ ಮಾಡಾವ!

ಸರಕಾರಕ್ಕ ನಾನೇ ನಿಮ್ಮ ವಿರುದ್ಧ ರಿಪೋರ್ಟ ಕಳಿಸಬೇಕಾದೀತು! ನಾನೂ ನರಗುಂದದೊಳಗ ಹುಟ್ಟಿ ಸೂರೇಬಾನದಾಗ ಬೆಳದಾವಾ! ನನ್ನ ವೈಯಾಗಿನ ಮಲಪ್ರಭಾದ ನೀರೇನು ಇನ್ನೂ ಆಟ್ಟಿಸಿಲ್ಲಾ!

ಸುಪ್ರಿ— ಗೌಡ್ರs, ಯಾಕs ನಿಮುಗೂ ಜೀವಾ—!

ರಾ. ಗೌಡ್ರು— ಹ್ಞಂ! ಗುಂಡು ನಿಮ್ಮ ಕೈಯಾಗಿನದಾದರೂ ಜೀವದ ಹಂಗು ನಮ್ಮ ಕೈಯಾಗಿಂದು! ಆದನ್ನs ಬಿಟ್ಟವರಿಗೆ ಈ ಹೆದರಿಕೆ ಹಾಕಿ ಯಾಕ ಉಸರು ಕಳಕೋತೀರಿ? ಸಂಣವನೇ ಆಗಲಿ, ಪುಟ್ಟವನೇ ಆಗಲಿ; ನಾನೂ ಸರಕಾರೀ ನೌಕರ ಅನಿಸಿಕೋತೀನಿ. ನನ್ನ ಹೆಣಕ್ಕ, ಖೊಟ್ಟಿ ಪಂಚನಾಮೆ ನಡೀಲಿಕ್ಕಿಲ್ಲಾಂಬೋದು ಗೊತ್ತಿಲ್ಲೇನ್ ನಿಮುಗ?

ಸುಪ್ರಿ— (ಸೋತಂತೆ) ಇರ್ಲಿ, ಈಗ ನೀವು ಇಲ್ಲಿಂದ ಹೋಗ್ರಿ, ಹಿಂದಾಗಡೆ ನೋಡತೀನಿ! ನನ್ನಂಥಾ ಅಧಿಕಾರಿ ಅಂದರೇನು; ನಾಲ್ವತ್ತೊಂದು ವರ್ಷದ ಅನುಭವಾ ಅಂದರೇನು? ಇಡೀ ಜಿಲ್ಹಾದ ದೊಡ್ಡ ದೊಡ್ಡ ದೇಸಾಯಿ ದೇಶಪಾಂಡೇರು ಸಹ ನನ್ನ ಹೆಸರಿಗೆ ಥರಾ ಥರಾ ನಡಗೂವಾಗ, ಈ ಹಳ್ಳೀ ಕೆಂಚರು ನನಗ ಸೊಪ್ಪು ಹಾಕವಲ್ಲರಲ್ಲಾs!! ಈ ಪಿಸ್ತೂಲು, ಈ ಬಂದೂಕೂ, ಆ ಮಸೀನ್ ಗನ್ನು, ಗುಡಿಸಲಾ ಸುತ್ತುಗಟ್ಟಿ ನಿಂತ ಯುರೋಪಿಯನ್ ಸೋಲ್ಜರರೂ........, ಅವರಿಲ್ಲದಿದ್ದರೂ ನಾ ಹಚ್ಚಿದ ದುಡ್ಡಿನ ಆಶಾ, ಹುದ್ದೇದ ಆಶಾ, ಯಾತಕ್ಕೂ ಇವರು ಮಣೀಲಿಲ್ಲ ಅಲ್ಲಾ!! ಈವತ್ತ ನಾ ಸರದಾರನಂಥಾ ಮನುಷ್ಯಾ, ಈ ಹುಂಬರೆದುರು ಸೋಲು ಒಪ್ಪಿಗೋಬೇಕಾತಲ್ಲಾ! ಸಾವಿರಗಟ್ಲೆ ಜನರನ್ನು ಗೋಳೀಬಾರು, ಕಂಣೀರುಹೊಗಿ ಹಾರಿಸಿ ಉಫ್ ಅನಿಸಿದ ನನಗೆ ಮುಪ್ಪಿನಿಂದ ನಡಾ ಬಗ್ಗಿದ ಮುದಿಕೀನು ಬಗ್ಗಬಾರದೂ ಅಂದರ ........!! ಆಂ! ಆ ಮೀಸಿ ನುರಿಯದ ಹುಡುಗಾ ಈಹೊತ್ತು ನನಗ, ನಾಲ್ವತ್ತು ವರಸ ಸರ್ವೀಸು ಆದ ನನಗ ಎಂಥೆಂಥಾ ಮಾತ ಆಡಿದಾ! (ಮತ್ತೆ ಕೈ ಹಿಂದೆ ಕಟ್ಟಿ ಧೇನಿಸುತ್ತ ಅತ್ತಿತ್ತ ಸುತ್ತಾಡಿ)

ಯಾಕೆ, ಗೌಡ್ರs; ನಿಮಗ ಹೋಗಲಿಕ್ಕೆ ಹೇಳಿದ್ದೆ; ಅಲ್ಲಾ? ಹೋಗಿರಿ; ಇಷ್ಟು ಫಜೀತಿ ಆದದ್ದೇ ಸಾಕು. ಹುಂ ಹೋಗಿರಿ;—ಫೌಜ್ದಾರ ಸಾಹೇಬರಿಗೆ ನಾ ಇದೇ ಈಗ ಬಂದೇ ಅಂತ ಹೇಳ್ರಿ. (ಗೌಡ್ರು ಅಸಿಮಿಸಿಯಿಂದ ಹೊರಡುವರು) ಅಂತೂ ನಾ ಇಲ್ಲಿ ಇವೊತ್ತು ಹೊಸಾ ಪಾಠ ಒಂದು ಕಲೀಬೇಕಾತು. ಅದೇನೋ ಕಥೀಯೊಳಗ, ಮೊಲಾ ತಿರುಗಿ ನಿಂತು ಬ್ಯಾಟೀ ನಾಯಿನ್ನ ಬೆವರಿಸಿದ್ವ್ಯಾ, ಅಂತ! —ಅದನ್ನಿಲ್ಲೆ ಕಣ್ಣೀಲೆ ಕಂಡ ಹಾಗಾಯಿತು. ತಿರಿಗಿತು ಕಾಲ ತಿರಿಗಿತು!.... ಇಕಾ ಒಂದ ಹೊಡೀತು ರಾತ್ರೀನೂ ತಿರಿಗಿತು.... ಅಲ್ಲಾ, ಆ ಮಗನ ಹಟದೊಳಗ, ಈ ಮುದಿಕಿ ಮಾತಿನ್ಯಾಗ ಐದು ಲಾರೀ ತುಂಬಿ ಬಂದ ದಂಡನ್ನ ತರುಬಿ ನಿಲ್ಲಿಸುವ ತಾಕತ್ತು* ಇರಬೇಕಂದ್ರ!! ಆಕೆ ಹೇಳಿದ್ಹಾಂಗ ಅವರನ್ನ ಕೊಲ್ಲಿಸಿದರೂ ನನ್ನ ಕೆಲಸ ಕೈಗೂಡಲಿಕ್ಕಿಲ್ಲಾ! ಆದರೂ ಕೊಲ್ಲಿಸಬೇಕು; ಕೊಲ್ಲಿಸಲೇಬೇಕು ಅವರನ್ನ! (ಅರ್ಭಟದಿಂದ ಎಡಗೈ ಮುಷ್ಟಿ ಎತ್ತಿ ನಿಲ್ಲುವನು. ಆತನ ಆರ್ಭಟಕ್ಕೆ ಹೌಹಾರಿದ ಸೊಸೆ ಮೆಲ್ಲನೇ ಮುಂದರಿದು ಬಂದು ಆತನ ಕಾಲಬಳಿ ಸಾಗರಬಿದ್ದು ಮೊಗ ಮೇಲೆತ್ತಿ ಅತಿ ದೀನಳಾಗಿ ಬೇಡಿಕೊಳ್ಳುವಳು.)

**ಸೊಸೆ**— ಕೊಲ್ಲಿಸಬ್ಯಾಡರಿ ಯಪ್ಪಾ. ಕೊಲ್ಲಿಸ ಬ್ಯಾಡರಿ ನಿಮ್ಮ ಕೈ-ಕಾಲು ಕಟ್ಟಿಗೋತೇನಿರಿ, ಯಪ್ಪಾ! ನನ್ನ ಗುಳದಾಳೀ§ ಪುಣ್ಯಾ ಕಾಯರಿ. (ಅಳುತ್ತಾ ಆತನ ಕಾಲು ಹಿಡಿದು ನೆಲಕ್ಕೆ ಬೀಳುವಳು.)

**ಸುಪ್ರಿ**— (ಆಶ್ಚರ್ಯದಿಂದ ತಿರುಗಿ ನಿಂತು) ಹಾಂ. ಹಾಂ. ನೀ ಒಬ್ಬಾಕಿ ಇಲ್ಲೀ ಇದ್ದೇನು? ನನ್ನ ಲಕ್ಷ್ಯ ಹೋಗಿದ್ದಿಲ್ಲ ಬಿಡು ನಿನ್ನ ಕಡೆಗೆ; (ಅವಳನ್ನು ಚನ್ನಾಗಿ ನಿರೀಕ್ಷಿಸಿ ಆನಂದೋತ್ಸಾಹಗಳನ್ನು ವ್ಯಕ್ತಪಡಿಸುತ್ತ) ಅಲಲ! ಹಕ್ಕಿ ಇನ್ನೂ ಕೈಯ್ಯಾಗ ಅದೆ. ನನ್ನ ಪುಣ್ಯಾ ಪೂರಾ ತೀರಿಲ್ಲ.

**ಸೊಸೆ**—ನಿಮ್ಮ ಪುಣ್ಯಾ ತೀರಾಣಿಲ್ಲರಿ ಯಪ್ಪಾ, ಅವರನ್ನ ಕೊಲ್ಲಸಬ್ಯಾಡರಿ ಮಾತ್ರ!

**ಸುಪ್ರಿ**— ನನ್ನ ಪುಣ್ಯಾ ತೀರಿಲ್ಲಾ ಅಂತ ನೀನು ಭರೋಸಾ† ಕೊಡತೀಯಲ್ಲs! ಅದೂ ಒಂದು ಹೊಸಾ ಪುಣ್ಯಾ ನನ್ನದು. ಅಕಾ ಅಲ್ಲೆ

---

* ಶಕ್ತಿ. § ಮಂಗಲಸೂತ್ರ. † ನಂಬಿಗೆ.

ನೋಡು; ಎದ್ದು ನಿಂತು, ಆ ಕಿಡಿಕಿಯೊಳಗಿಂದ; ಅಂದ್ರ ನಿನ್ನ ತಾಳೀಯೊಳೀ ಎಷ್ಟ ಕಟಗರಿಸ್ಯೈತಿ ಅಂತ ಗೊತ್ತಾಗತ್ಯೈತಿ.

**ಸೊಸೆ**— (ಸಂಕಟದಿಂದ) ಯಪ್ಪಾ, ಅಷ್ಟ ಮಾತ್ರ ಮಾಡಬ್ಯಾಡರಿ! ನಾ ಯೆಲ್ಲಾ ಹೇಳತೇನರೀ!

**ಸುಪ್ರಿ**— (ಆನಂದ ಮೇರೆವರಿದಂತೆ ಮೈಯುಬ್ಬಿಸಿ ಕಂಣು ಅರಳಿಸಿ ಕಿವಿ ಹಿಗ್ಗಿಸಿ) ಆಂ! ಆಂ! ಏನೂ? ಏನಂದೀ! ನೀ ಹೇಳತೀ!! ಆಂ ಆಂ ನೀ ಹೇಳತೀ! (ಸುತ್ತೂ ಹುಚ್ಚನಂತೆ ತಿರುಗಿ, ಕೊನೆಗೆ ಟೇಬಲ್ಲಿಗಾತು ನಿಂತು ಅದನ್ನು ಚಪ್ಪರಿಸುತ್ತ) ಹಃ ಹಃ ನೀ ಎಲ್ಲಾ ಹೇಳತಿ........ಏನೂ ಮುಚ್ಚಿಡಾಕಿಲ್ಲ ಹೌದಲ್ಲೋ? ಹೇಳು ಹಾಗಾದರ ಗಡಾ ಹೇಳು. ಇನ್ನೂ ಐದು ತಾಸು ರಾತ್ರಿ ಐತೀ; ಗಡಾ ಹೇಳು! ಈ ಶಿವ ನಾಗಪ್ಪಾ, ಹಿಂದಕ ಸೋಲಲಿಲ್ಲಾ; ಇಂದೂ ಸೋಲಲಿಲ್ಲಾ! ಹೇಳು ಹೇಳು (ಅವಳೆದುರು ಮಂಡೆಗಾಲೂರಿ ನಿಂತು) ಗಡಾ ಹೇಳು. ಇಲ್ಲದಿದ್ದರ ಗಾತ ಆದೀತು ನೋಡು ಮತ್ತs!

**ಸೊಸೆ**— (ಮೆಲ್ಲಗೆ ಸಾವರಿಸಿಕೊಳ್ಳುತ್ತ ಉದ್ವೇಗವನ್ನು ಹತ್ತಿಕ್ಕಿಕೊಳ್ಳುತ್ತ ತುಂಬಿದ ಗಂಟಲವನ್ನು ಸರಿಪಡಿಸಿಕೊಳ್ಳುತ್ತ) ಹೇ ಹೇ...... ಳ...... ತೀ.. ನಿ.. ಯಪ್ಪಾ!.... ನನಗ ಗೊತ್ತಿದ್ದಷ್ಟು ಹೇಳತೀನ್ರಿ....ಆದರ....ಅವ ರನ್ನ ಕೊಲ್ಲಸಬಾರದ್ರೀ....ಮತ್ತ....!

**ಸುಪ್ರಿ**— ಇಲ್ಲಿಲ್ಲಾ! (ಅವಸರದಿಂದ) ಹೇಳ ನೀ ಗಡಾ ಹೇಳು.

**ಸೊಸೆ**— ಅವರ....ಜೀವಕ್ಕ....ಏಟೇಟು ಧಕ್ಕೆ* ಆಗಾಕ ಇಲ್ಲಾಂತ.... ವಚನಾ,....ವಚನಾ ಕೊಡತೀರಾ?

**ಸುಪ್ರಿ**— ಹೂಂ ಹೂಂ ವಚನಾ ಕೊಡತೀನಿ, ಎಲ್ಲಾ ಕೊಡತೀನಿ; ಮೊದಲ ಹೇಳು ನೀ; ಹೊತ್ತು ಬಹಳ ಇಲ್ಲಾ.

**ಸೊಸೆ**— ಮಾತು ಅಗದೀ ಗಟ್ಟೆರಿ ಹಾಂಗಾರ?

**ಸುಪ್ರಿ**— ಅಗದೀ ಗಟ್ಟಿ, ನೀ ಹೇಳ್ಯಾರ ನೋಡು.

**ಸೊಸೆ**— ಹಾಗಾದರ.... ಇಕಾ ನೋಡ್ರಿ ("ಸುಪ್ರಿ"ಯು ಇನ್ನೂ ಹತ್ತಿರ ಬರುವನು. ಆತನಿಗೆ ಮುಳ್ಳಮೇಲೆ ನಿಂತಂತಾಗಿದೆ) ನೋಡ್ರಿ ಮತ್ತ ಆ ಜನರೆಲ್ಲಾ.... ಆಚೇಕೆ....ಆಲೂರ ಸ್ಟೇಶನ್ನಕ್ಕ

---

* ಅಪಾಯ

ಸುಪ್ರಿ— ಹಾಂ ಆಲೂರು....ಆಲೂರು. ಏ ಶಿವನಾಗಪ್ಪಾ ನೀ ಗೆದ್ಯೋ! ನೀ ಗೆದ್ದಿ. ಕಡೀಕೂ ನೀ ಗೆದ್ದಿ. (ಅವಳಿಗೆ) ಏ....ಮತ್ತ, ನಿನ್ನ ಮಾತು ಸುಳ್ಳಾದರs....? ಏನು ನೀನೂ ನಮ್ಮ ತಲೀಮ್ಯಾಲ ಮೆಣಸು ಅರೀಲಾಕ ನಿಂತೀಯೋ?

ಸೊಸೆ— ಕರೇವು ಸಾಹೇಬರs ಕರೇವು! ಅವರನ್ನ ಮಾತ್ರ ಇಲ್ಲೆ ಕಳಿಸಿ ಕೊಡ್ರಿ ವಳ್ಯಾಕ. ನಾ ಹೇಳಿದ್ದು ಅಗದೀ ಕರೇವು. ಅವರು ಮಾತಾಡಿದ್ದು ಹಿತ್ತಲ ಬಾಕಲದಾಗಿಂದ ಕೇಳಿದ್ದೆ; ಯಪ್ಪಾ. ದೇವ ರಾಣ್ರಿ, ಅವರನ್ನ ಮಾತ್ರ ನನ್ನ ಕಡೆ ಕಳಿಸರೆಪ್ಪಾ (ಸುಪ್ರಿಯು ತನ್ನ ಉತ್ಸಾಹದ ಅಬ್ಬರದಲ್ಲಿಯೇ ಇರಲು ಕಂಣು ಮೇಲೆತ್ತಿ) ಶಿವಾ, ಶಿವಾ ಭಗವಂತಾ ನನ್ನ ತಪ್ಪ ಆಗಿದ್ರ ಹೊಟ್ಟ್ಯಾಗ ಹಾಕ್ಕೋ ನನ್ನ ತಂದೆ. (ಕಂಣ್ಣೀರಿಡುತ್ತ ಬಾಗಿ ಬಳುಕುವಳು)

ಸುಪ್ರಿ— ಹಃ ಹಃ! ಜಗತ್ತಿನೊಳಗ ಇನ್ನೂ ಭಗವಂತ ಇದ್ದಾನ ಬಿಡು. ಅಂತs ಕೈ ಸೋತು ಕೂತಿದ್ರೂ ಕೊನೆಗೆ ನನ್ನ ಕೆಲಸ ಕೈಗೂಡಿತು. ಜಗತ್ತಿನೊಳಗಿನ ಎಲ್ಲಾ ಜನರೂ ಏನು ಇನ್ನೂ ತಿಳವುಗೆಟ್ಟಿಲ್ಲಾ ಅಂತೂ ಖಾತ್ರಿ ಆತು. (ತನ್ನ ಸಾಮಾನುಗಳನ್ನು ಎತ್ತಿಕೊಂಡು ಉಳಿದ ಸಿಪಾಯಿಯೊಂದಿಗೆ ಉತ್ಸಾಹದಿಂದ ಹೊರಡುವನು.)

ಸೊಸೆ— (ಕೂಗಿ ಆತುರದಿಂದ) ಯಪ್ಪಾ ಸಾಹೇಬರs, ನನ್ನ ಗಂಡನ್ನ ಮತ್ತ ಬದಕಿಸಿ ಕೊಡ್ರಿ ಯಪ್ಪಾ, ನೀವು ವಚನಾ ಕೊಟ್ಟೀರಿ. (ಗಾಗರೆಯು ವಳು)

ಸುಪ್ರಿ— (ಹೋಗಹೋಗುತ್ತ) ಹೌದು. ಹೌದು. ಇಲ್ಲೆ ನಿನಗೂ ವಚನಾ ಕೊಟ್ಟೇನಿ; ಅಲ್ಲೆ ಅದಕ್ಕೂ ಮೊದಲು ಯಮರಾಜನಿಗೂ ವಚನಾ ಕೊಟ್ಟೇನಿ! ಯಾರ ವಚನಾ ಪಾಲಸೂದಾಗತೈತೋ, ಇದೇ ಈಗ ನಾ ಹೊರಗ ಹ್ವಾದ ಮ್ಯಾಲೆ ತಿಳೀತೈತಿ! ಕೇಳತಿರು ಕಿವಿಗೊಟ್ಟು!! (ಅವರೆಲ್ಲ ಹೋಗಲು ಸೊಸೆಯೊಬ್ಬಳೇ ಹುಚ್ಚಿಯಂತೆ ಹೌಹಾರಿ ನಿಲ್ಲುವಳು. ಒಂದೆರಡು ನಿಮಿಷ ಎಲ್ಲ ಸ್ತಬ್ಧ. ಆದರೂ ಹೊರಗಿನಿಂದ ಸಿಪಾಯರ ಬೂಟಿನ ಸಪ್ಪಳ, ಬಂದೂಕುಗಳನ್ನು ಎತ್ತುವ ಖಣಖಣಾಟ ಮಾತ್ರ ಕೇಳುತ್ತದೆ. ಸೊಸೆಗೆ ಕಂಣು ಕತ್ತಲು ಕೂಡಿಸಿದಂತಾಗಿ ಅರ್ಧಮರ್ಧ ಹೊಯ್‌ದಾಡುತ್ತಿದ್ದಾಳೆ. ಅಷ್ಟರಲ್ಲಿ ಧಡ ಧಡಲ್ ಎಂಬ ಗುಂಡಿನ ಸಪ್ಪಳ. ಸೊಸೆ ಚಿಟ್ಟನೆ ಚೀರಿ ಆಘಾತತಪ್ಪಿ ನೆಲಕ್ಕೆ

ಬೀಳುವಳು. ಹೊರಗಿನಿಂದಲೂ ಆರ್ತ ಚೀತ್ಕಾರ ಕೇಳಬರುವದು. ಆಮೇಲೆ ಮತ್ತೆ ಕೆಲಹೊತ್ತು ಸ್ತಬ್ಧ; ಸಿಪಾಯಿಗಳೂ ಸೋಲ್ಜರರೂ ಹೊರಟು ಹೋಗುವ ಸಪ್ಪಳ ಮಾತ್ರ ಕೇಳುತ್ತಿದೆ. ಎರಡು ಮೂರು ನಿಮಿಷಗಳ ನಂತರ ಬಲು ಹೌಹಾರಿದಂತಿದ್ದ ಮುದುಕಿ ಕಸುವುಗೆಟ್ಟು ಜೋಲೀ ಹೊಡೆಯುತ್ತ ಬರುತ್ತಾಳೆ. ಸೊಸೆಯು ಹತ್ತರ ಬಂದು ಅವಳು ಬಿದ್ದದನ್ನು ನೋಡಿ ಅಲ್ಲಾಡಿಸಿ ಎಬ್ಬಿಸುತ್ತಾಳೆ. ಸೊಸೆ ಸಹಿಸಲಸಾಧ್ಯವಾದ ದುಃಖ ಪಶ್ಚಾತ್ತಾಪಗಳಿಂದ ಮೂಕಳಂತಿದ್ದು ಬರಿಗಣ್ಣಿನಿಂದ ಮುದುಕಿಯನ್ನು ನೋಡಿಯೇ ನೋಡುತ್ತಾಳೆ.)

ಮುದುಕಿ— ಕೇಳಿಸ್ತೇನs ತಂಗೀ! ಏನಾತು ತಿಳೀತs? (ಉನ್ಮತ್ತಳಂತೆ).... ಹಂ ಹೋದಾ! ನಮ್ಮ ಮಲ್ಲಣ್ಣಾ ಹೋದಾ! ಆದರ....ಆದರ.... ಎಲ್ಲಾರ್ಹಾಂಗ ಹೋಗಲಿಲ್ಲಾ ನನ್ನ ಮಗಾ! ತನ್ನ ಹೆಸರಿಗೆ ತಕ್ಕ ಹಾಂಗ ಹ್ವಾದಾ!....ನಮ್ಮ ಮಲ್ಲಣ್ಣಾ ಒಂದು ಏಟಿಗೆ ಬಿರಿಯೋ ಬಂಡೇ ಆದೂ! ಆ ಮಸಿನಗನ್ನು ಟಪಟಪಾಂತಿರೂವಾಗ ಆತ ಎದೀ ಸೆಟಿಸಿಗೊಂಡು ನಿಂತಿದ್ದ ನೋಡಿ ನನಗೆ ತಟ್ಟನೆ ಹೋಗಿ ತಬ್ಬಿಕೋ ಬೇಕು ಅನಿಸಿತು ನೋಡs!.... ನನ್ನs ಮೈಹುಳೇ ಹೊಡದು ಗಿಡಕ್ಕೆ ಕಟ್ಟಿರದಿದ್ದರೆ, ನಾ ಹಾಂಗs • ಮಾಡಿ ಇಟ್ಟೊತ್ತಿಗೆ ನಾನೂ ನಮ್ಮ ಮಲ್ಲಣ್ಣನ ಸಂಗಾಟ ಹೊಂಟಿರತಿದ್ದೆ ಕೈಲಾಸಕ! ....ಆಂ! ಆಂ!....ಸುಮ್ಮಾಗು! ಸುಮ್ಮಾಗು! ಅಳತೀಯಾಕ ಹುಚ್ಚೀ! ಇಕಾ—ಇಕಾ, ಕೇಳಿಲ್ಲೆ ಆ ಗುಂಡಿನ ಗುಡುಗು ಇನ್ನೂ ಎದಿಯೊಳಗ ಗುಡು ಗುಡು ಅಂತೈತಿ. (ಅಷ್ಟರಲ್ಲಿ ಹೊರಗೂ ಮತ್ತೆ ಗುಡುಗು ಮಿಂಚಿನ ಆರ್ಭಟ; ಅದರಿಂದ ಮುದುಕಿ ಹೆಚ್ಚು ಉದ್ವೇಗವಶಳಾಗುತ್ತಾಳೆ.) ಅದ್ಯಾಕs! ನೋಡ್ ನೋಡ್ ನಮ್ಮ ಮಲ್ಲಣ್ಣನ್ನ ಕೊಂದ ಗುಂಡಿನ ದನೀ ಗಗನಕ್ಕ ಮುಟ್ಟಿತು! ಹಬ್ಬಿತು, ಹಬ್ಬಿತು. ದೇಶದ ತುಂಬೆಲ್ಲಾ ಹಬ್ಬಿತು ಆದರ ಗುಡುಗು! ಕೇಳು, ಕೇಳು.....ಆಕಾ ಹೌದs ಯಮಕನಮರಡೀ ತಟದು, ಏಳೂರಗಡಿ ದಾಟೀ, ಸವದತ್ತೀ ಗುಡ್ಡಾ ಸುತ್ತಿ, ಬಾದಾಮೀ ಬಂಡಿಗೆ ಹೋಗಿ ಬಡೀತು ನೋಡು ಆ ಗುಂಡಿನ ಧನೀ! ಹಂ! ಇನ್ನೇನು ಕೇಳ್ತೀ!.... ನಮ್ಮ ಜನರೆಲ್ಲಾ ತಂಡತಂಡಾಗಿ ಎದ್ದರು. ನೋಡ್ ಹೌದುs, ಆ ಗುಂಡಿನ ದನೀಗೆ! ಇನ್ಮ್ಯಾಗ ನಮ್ಮ ಮಲ್ಲಣ್ಣನ ಕಸಪs ಎಲ್ಲಾರ

ರಟ್ಟ್ಯಾಗೂ ತುಂಬತೈತಿ. ಇನ್ಯಾಕ ಅಳ್ತೀ ಬಿಡು—ಏಳು! ಏಳು! (ಸೊಸೆ ಅರ್ಧ ಎದ್ದು ಶೂನ್ಯಹೃದಯಳಾಗಿ ಕೂಡುತ್ತಾಳೆ) ....... ಇಷ್ಟು ದಿನಾ ಜನರು ನನಗ ತಳವಾರ ಮುದುಕಿ ಅಂತಿದ್ರು; ಯಾರಗಟ್ಟೀ ಚಾದಂಗಡೀ ನರಸಮ್ಮಾ ಅಂತಿದ್ರು. ಇನ್ನ ಮ್ಯಾಗ ಜನರೆಲ್ಲಾ ನನಗ.... ನನಗ ಮಲ್ಲ–ಮಲ್ಲಣ್ಣನ ತಾಯಿ ಅಂತಾರು!.... ಅಲ್ಲಾ ಸಂಗೊಳ್ಳಿ ರಾಯಣ್ಣನ ಚಿಕ್ಕ ಸೊಸಿ ಆಗಿ ಸಿಂಧೂರ ಲಕ್ಷ್ಮಣನ ಸಾಕುತಾಯಾಗಿ ನನ್ನ ಕಿಮ್ಮತ್ತು ಕಡಮೆಯಾಗಿತ್ತು. ಈಗ ಮಲ್ಲಣ್ಣನ ಖರೇ ತಾಯಿ ಅನಿಸಿಗೊಂಡದಕ್ಕ ಇವೊತ್ತು ನನ್ನ ಕಿಮ್ಮತ್ತು ಇನ್ನಷ್ಟು ಹೆಚ್ಚಾತು! ಇನ್ಮ್ಯಾಗ ನನ್ನ ಮಗನ್ನೂ ದೇಶೆಲ್ಲಾ ಹಾಡಿ ಹರಸ್ತೈತಿ. ನಮ್ಮ ನಾಡಿನ ಹಿರೇರು ಎಲ್ಲಾ ಕೂಡಿ ಆತನ ಹೆಸರ್ಲೆೇನೂ ಗುಡಿ ಕಟ್ಟಿಸ್ತಾರು. ಮುಂದ ಬರೋ ಮಕ್ಕಳು ನಮ್ಮ ಮಲ್ಲಣ್ಣನ ಲಾವಣೀ ಕಟ್ಟಿ ಓಣಿ ಓಣಿ ಹಾಡ್ತಾರು. ....ಆಂ! ....ಆಂ! ಎಂತಾ ಹುಡುಗಾ. ಎಂತಾ ಎದೀ, ಎಂತಾ ಕೆಚ್ಚು.... ಸಾವಿರ ರೂಪಾಯಿ ಸುರವ್ತೇವೆಂದರೂ ಹುಡುಗ ಜಪ್ಪನ್ನಲಿಲ್ಲಾ; ಹೊಟ್ಟ್ಯಾಗಿನ ಮಾತು ಹೊರಗ ತಗೀಲಿಲ್ಲಾ— (ಸೊಸೆ ಆ ಮಾತಿಗೆ ಹಣೆಗಟ್ಟಿಸಿಕೊಂಡು ನೆಲಕ್ಕೆ ಬೀಳುತ್ತಾಳೆ) ತಂಗೀ, ನೀ ಹಾಂಗ್ಯಾಕ ಕೈಕಾಲುಗೆಡತೀ?.... ಕೇಳಲ್ಲೆ ನಿನ್ನ ಗಂಡ ಎಂಥಾವಾ!! ಖರೇ ಗಂಡಸು ಅವಾ! ಅವಗ ತಕ್ಕ ಮಗನ್ನs ನೀನೂ ಹಡೀಬೇಕು : ನೋಡು ಮಗಳs! (ಸೊಸೆ ಗೋಳಿಟ್ಟು ಹೊರಳಾಡುವಳು) ಅಂದರ ಈ ಮುದುಕೀ ಕಿಮ್ಮತ್ತು ಇನ್ನೂ ಹೆಚ್ಚಾದೀತು!.... ಆಯ್ ಮಗಳs ಹಾಂಗ್ಯಾಕ ಹೊಳ್ಯಾಡ್ತೀ!—ಏಳು—ನಡೀ—ಬಾ.... ಅಕಾ ಹೊರಗ ಅವನ ರಕ್ತದಲೆ ಕೆಂಪಗಾದ ಕೆಮ್ಮಣ್ಣಿನ ಕೆಸರಾಗs ಇಬ್ಬರೂ ಹೊರಳಾಡೋಣ· ಬಾ! ಈ ಸಾವಿನಿಂದ ಈ ಮಾತು ಇಲ್ಲಿಗೇ ಮುಗಿಲಿಲ್ಲ ಮಗಳs! ಈಗ ಆರಂಭಾತು. ಇನ್ನೂ ಮುಂದ ಸಾಗೋದೈತಿ. ಬಾ ಏಳು!—ಅಕಾ ನೋಡು ಹೌದs, ಗೌಡರೂ ಬಂದರು!— (ಗೌಡರು ಆತುರ ಅವಸರಗಳಿಂದ ಆದರೂ ಕಳ್ಳಹೆಜ್ಜೆಯಲ್ಲಿ ಪ್ರವೇಶಿಸುತ್ತಾರೆ.)

ರಾ. ಗೌಡ್ರು— ನರಸವ್ವಾ, ನರಸವ್ವಾ, ಏಳರಿನ್ನು ಸುತ್ತ ಐವತ್ತು ಹರದಾರಿಗೆಲ್ಲಾ ಹೋತು ಸುದ್ದಿ! ಇನ್ನೇನು, 'ಉಪ್ಪು' ತಿರುಗಿತು; ಇನ್ನ ನಮ್ಮ ಜನರು ಅಸಗೊಳ್ಳವರಲ್ಲಾ. ಈ ನೂರಾ ಐವತ್ತು ವರ್ಷ ನಾವು ಹೊತ್ತ ಹೊರೆ ಇಳಿಸೇ ಬಿಡತೇವಿ; ಇನ್ನು ಬಿತ್ತು ಸರಕಾರಕ್ಕs ನಮಗs ಗಂಟು. ಏಳರಿ. ನೀವು ಮಾತ್ರ ಕೈಕಾಲು ಗೆಡಬ್ಯಾಡಿರಿ; ಈಗಾಗಲೇ ಸುದ್ದಿ ಸೂರೇಬಾನಕ್ಕ ಹೋಗ್ಯೆತಿ..... ಆ ಸೂಳೇಮಕ್ಕಳೂ ರಾಮದುರ್ಗದ ಕಡೆಗೆ ಹೋದರು. ನಮ್ಮ ಕೆಲಸಾ ಘಾತ ಆದ್ರೂ ಆದೀತು; ಅವರು (ಮಲಪ್ರಭಾ) ನದೀ ದಾಟೋದ್ರಾಗs, ಸುದ್ದಿ ಆಲೂರಿಗೆ ಮುಟ್ಟಬೇಕು. ಈ ಮಧ್ಯ ರಾತ್ರ್ಯಾಗ ಎಚ್ಚತ್ತು ಎಲ್ಲಾ ನಿಟ್ಟಿಗೂ ಹಳ್ಳೀ ಮಂದೆಲ್ಲಾ ಸಜ್ಜಾಗಿ ಹೊರಟಾರ! ಆದ್ರ ನೋಡು ನರಸವ್ವಾ, ಮುಖ್ಯ ನೀ ಮಾತ್ರ ಎದೀ ಅಳುಕಗೊಡಬಾರದು,— ಇವತ್ತಿನ ದಿವಸ! ಇಂಥಾ ಸಾವು ಇದೂ ಸಾವಲ್ಲಾ; ಮುಂದಿನ ಬಾಳ್ವೇ ಬೆಳಸೋ ಗೊಬ್ಬರಾ!

ಮುದುಕಿ— ಕರೇವು ರಾಘಪ್ಪಗೌಡ್ರ— ನೀವನ್ನೋದು ಖರೇ— ಹೌದ ಬಿಡ್ರಿ. ಆದ್ರ ಇವತ್ತ ನನ್ನ ಹೊಟ್ಯಾಗ ಕಿಚ್ಚಿಂತಾದ್ದು ಬಿದ್ದೈತಿ ಗೊತ್ತೈತ್ರೀ! ನಾಲವತ್ತು ವರ್ಷದ ನಡು ವಯಸ್ಸಿನಾಗ ಹುಟ್ಟಿದ ಒಬ್ಬನೇ ಒಬ್ಬ ಮಗಾ! ಮಕ್ಕಳನ್ನ ಕಳಕೊಂಡ ತಾಯಂದರು ಜಗತ್ತಿನಾಗ ಮನಾರ ಇದ್ದಾರು; ಇಕಾ ನಾನೂ ಅದೇನ್ರೀ! ಈಗ ನನ್ನ ದುಃಖ ಹೆಚ್ಚೋ ಕಡಮ್ಯೋ ಅಂತ ನೋಡಾಕೂ ಪುರಸೊತ್ತಿಲ್ರಿ ಗೌಡ್ರ. ಎದಿ ಕಿಚ್ಚು ಏಟs ಇದ್ರು ಮನಸ್ಸಿನ ಕೆಚ್ಚನ್ನ ಕುಸಿಗೊಡವಲ್ದರೀ ಇವತ್ತಿನ ಪರಸಂಗಾ! ಹಾಂಗಂದ್ರ! ಗೌಡರs ನಾ ಮಲ್ಲಣ್ಣನ್ನ ಕಳಕೊಂಡೆ ಅಂತೀರೇನ್ರೀ?.... ಇಲ್ರಿ! ಗೌಡರs ನಾನs ಕಣ್ಣಾಂಡು ಇವತ್ತ ಮಗನ್ನ ಬಲೀ ಕೊಟ್ಟಾಂಗ ಆಗ್ಯೆತ್ರಿ! ಆಗಲಿ! ಆಗಲಿ! ಜನಕ್ಕ ಖೊಟ್ಟ ಆಗಿ ಬದಕೋದಕ್ಕ ಮಲ್ಲಣ್ಣನs ಒಪ್ಪಾಂವಲ್ರಿ ಗೌಡರs; ಅದು ನನಗ ಗೊತ್ತು! ಮ್ಯಾಲೆ, ಹಾಂಗ ಖೊಟ್ಟ ಆದ್ರೂ ಭದುಕೋ ಖಾತ್ರಿ ಅದs ಎಲ್ಲಿ ಐತ್ರಿ ಈಗಿನ ದಿವಸ್ದಾಗ? (ಸೊಸೆ ಚೀರಿಡುವಳು) ಗಾಬರಿಯಾಗಬ್ಯಾಡಾ ತಂಗೀ!

ಇಕಾ ನನ್ನ ಕಡೆ ನೋಡು; ಹೆಂಗಸಿಗೆ ಕರುಳು ಹೆಚ್ಚೋ, ಕಸಿವಿಸಿ ಹೆಚ್ಚೋ, ತಿಳಕೋ ಇವೊತ್ತ! ಗೌಡ್ರಽ, ರಾಘಪ್ಪಗೌಡ್ರ, ಆ ಗಾಂದಾರೀದೇವಿ ನೂರು ಮಕ್ಕಳ ತಾಯಿ ಆಗಿ ಎಲ್ಲಾ ತಾಯಂದಿರಕಿಂತ ಹೆಚ್ಚು ಅನಿಸಿಕೊಂಡಳಂತಽ! ಅದ್ಯಾಕ ಅನ್ನೋದು ಇವತ್ತ, ಈಗ, ತಿಳೀತು ನೋಡ್ರಿ, ಗೌಡ್ರ! ನನಗೂ ಮಲ್ಲಣ್ಣನಂತಾ ನೂರು ಮಂದಿ ಮಕ್ಕಳಿದ್ದಿದ್ರ,.... ಅಯ್ಯೋ ಏನ್ಮಾಡ್ತಿದ್ದೆ.... ಏನ್ಮಾಡ್ತಿದ್ದೆ!.... ಗೌಡ್ರಽ ಅಷ್ಟು ಮಕ್ಕಳ ಸಾವು ನೋಡೋದು ಆಗ್ತಿತ್ತೇನ್ರೀ ನನ್ನ ಕಣ್ಣಿಂದ? (ಉನ್ಮತ್ತ ವಿಕಾರದಿಂದ) ನೂರು ಮಂದಿ!....ನೂರು ಮಕ್ಕಳು— ಆಂ!....ನಮ್ಮ ಮಲ್ಲಣ್ಣಾ!

ರಾ. ಗೌಡ್ರು— ನೂರು ಮಕ್ಕಳೂ....ನಮ್ಮ ಒಬ್ಬ ಮಲ್ಲಣ್ಣಾ ಒಂದಽ ನೋಡು ನರಸವ್ವಾ! ನೀನು ಇವೊತ್ತು ಮಾಡಿದ ಬಲಿದಾನದ ಮುಂದ, ಎಂಥಾ ಗಾಂಧಾರಿ ಸಹಿತ ನಾಚಿ ತಲೆ ತಗ್ಗಿಸಬೇಕು. ನೀ ಏನು ಕಡಮೇ ತಾಯೀ! ನಿನ್ನಂಥಾ ತಾಯಿಯ ತ್ಯಾಗದ ಎದುರಿಗೆ ಜಗತ್ತೇ ತಲೀ ಬಾಗಿಸಬೇಕು. ನಿನ್ನಂಥವಳನ್ನ ಕಣ್ತುಂಬ ನೋಡಿ ನಿನ್ನಂಥಾ ಮಹಾತಾಯಿಗೆ ಮೊದಲ ನಮಸ್ಕಾರ ಮಾಡೋ ನನ್ನ ಪುಣ್ಯಾನೇ ಎಲ್ಲಾರಗಿಂತ ಹೆಚ್ಚಿನ ಪುಣ್ಯಾ! (ಆತ ಬಾಗಿ ವಂದಿಸುವ ಹೊತ್ತಿಗೆ ಸರಿಯಾಗಿ ಆಚೆಯಿಂದ ಗುಂಪುಕಟ್ಟಿ ಹೊರಟ ಜನರ ತಂಡದ 'ವಂದೇ ಮಾತರಂ' ಕೇಳುವದು. ಈ ಎಲ್ಲ ಸನ್ನಿವೇಶದಲ್ಲಿ ಮೈಮರೆತಂತಿದ್ದ ಮುದುಕಿ ಎಚ್ಚತ್ತಂತಾಗಿ ದೂರ ಸರಿದು ಹೋಗುತ್ತಿರುವ ದನಿಯನ್ನೇ ಆಲಿಸುವಳು. ಗೌಡರು ನಮಸ್ಕಾರ ಮಾಡಿ, ಮೆಲ್ಲನೆದ್ದು, ದನಿ ಹೋದ ಸಿಟ್ಟನ್ನೇ ಪಾಲಿಸಿ...) ಹೌದಽ ನೋಡಿದ್ಯಾ ನರಸವ್ವಾ; ನಮ್ಮ ಜನಾ ಎಲ್ಲಾ ತಂಡತಂಡಾಗಿ ಪಂಜು* ಹಚ್ಚಿಕೊಂಡು ಮರಡಿ ಕಡೆ ಹೋದರು. ನನಗಿನ್ನ ಹೆಚ್ಚು ವ್ಯಾಳ್ಯಾ ಇಲ್ಲ. ನಾ ಹೋಗ್ತೀನಿ! ನೀವು ಮಲ್ಲಣ್ಣನ್ನ ಒಳಗ ತಗೊಂಡು ಬರ್ರಿ ನಸಕು ಹರಿಯೂದ್ರಾಗ ನಾ ಮತ್ತ ಬರತೇನಿ ಮುಂದಿನ ವ್ಯವಸ್ಥಾಕ! (ದೂರದಲ್ಲಿ ಜನರ ತಂಡ ಪಂಜು ಹಚ್ಚಿಕೊಂಡು ಹೋಗುತ್ತಿರುವುದು ಕಿಡಿಕಿಯಿಂದ ಕಾಣುತ್ತಿರುವುದು.)

---

* ದೀವಟಿಗೆ

**ಮುದುಕಿ**— ನೀವು ಹೋಗರಿ ಗೌಡ್ರs, ಹೋಗ್ರಿ; ನಮ್ಮ ಮಲ್ಲಣ್ಣನ ಜೀವ ಹೋದದ್ದು ವ್ಯರ್ಥ ಆಗಬಾರದೂ; ಗಡಾನ ಹೋಗ್ರಿ! ಆತ ಯಾರ್‍ಯಾರ್‍ನ ಪಾರ ಮಾಡಬೇಕು ಅಂತ ತಂಜೀವಾ ಕೊಟ್ಟ,ನೋ ಅವರನ್ನ ಕೂದಲು ಕೊಂಕದ್ಹಾಂಗ ಪಾರು ಮಾಡೋದು ಮೊದಲೇ ಕೆಲಸ. ಹೋಗ್ರಿ ನೀವು. ನಮ್ಮ ಮಲ್ಲಣ್ಣನ ದೆಸಿಂದ ನನ್ನ ಉಡೀ ತುಂಬ ಜಾಗಾ ಐತಿ. ಹೋಗಿರಿ; ನನ್ನ ಮಗಾ ಆತ;....ಛೆ ಹೋಗ್ರಿ ನೀವು....ಗಡಾನ ಹೋಗ್ರಿ (ಗೌಡರು ಅರ್ಧ ಹೋಗಲು, ಅವರನ್ನೇ ಹಿಂದಿನಿಂದ ಉದ್ದೇಶಿಸಿ) ಗೌಡರs ಇಕಾ; ಕೇಳ್ರಿಲ್ಲೆ—ಮರಡೀಯಿಂದ ಮರಡಿಗೆ, ಗುಡ್ಡದಿಂದ ಗುಡ್ಡಕ್ಕ, ಪಂಜಿನ ಸಾಲು ಸಾಲು ಹತ್ತಿ ಮುಗಿಲಿಗೆ ದೀಪದ ತೋರಣಾ ಕಟ್ಟಿಧಾಂಗಾಗಲ್ರಿ.— ಇವತ್ತಿಂದಿವಸಾ! ಅಂದರ ಮಿಂಚಿನಾಂಗ ಸುದ್ದಿ ಆಲೂರಿಗೆ ಮುಟ್ಟ್ಯ ಮುಟ್ಟೇತು; ನಮ್ಮ ಮಲ್ಲಣ್ಣಾ ಕೈಲಾಸಕ್ಕ ಹೋಗೋದಾರ್‍ಯಾಗ ಬೆಳಕಿನ ಹಡದೀನೂ ಹಾಸಿಧಾಂಗಾದೀತು......... (ಅರೆನಿಮಿಷ ತಡೆದು, ಕನಸಿನಟ್ಟದಿಂದ ಕೆಳಗಿಳಿದವಳಂತೆ ಚೇತರಿಸಿ ಸೊಸೆಗೆ—) ಬಾ ತಂಗೀ,—ಬಾ ಗಡಾನs! ಹೊರಗ ನೋಡಬಾರದs. ಎಷ್ಟು ಚಳೀ, ಎಷ್ಟು ಮಳೀ, ನಮ್ಮಲ್ಲಣ್ಣಾನ್ನ ಒಳ್ಯಾಕ ತಂದು ಮಲಗಸೋಣ ಬಾ!— —ಬಾ— —ನಡೀ!

(ಮುದುಕಿ ತಡವರಿಸುತ್ತ, ಕಣ್ಮುಂಜಿನಾಚೆ ನೋಟ ನಾಟಿಸಿಕೊಂಡು ಮುನ್ನಡೆಯುವಳು; ಸೊಸೆ ಮುಗ್ಗರಿಸಿ ಬೀಳೇಳುತ್ತ ಹಿಂಬಾಲಿಸುವಳು. ಇಬ್ಬರೂ ಮಲ್ಲಣ್ಣನನ್ನು ಎತ್ತಲಾರವೆ ಎತ್ತಿ ತಂದು ಒಳಕೋಣೆಗೊಯ್ಯುವರು. ದೂರದಲ್ಲಿ ಅಸ್ಪಷ್ಟವಾದ "ವಂದೇ ಮಾತರಂ" ದನಿ ಸ್ಪಷ್ಟವಾಗುತ್ತಿರಲು.. .. ತೆರೆ.)

— ಮುಗಿಯಿತು —

## ೨

# ಮುಸುಕು ಅಥವಾ ಉದುರಿದ ಚಿಕ್ಕೆ

**ಪಾತ್ರಗಳು** *

೧. **ದೇವದೂತ.**

೨. **ಜನ್ಮೋತ್ಸುಕ ಜೀವ.** (ಭೂಲೋಕಗಾಮಿ ಜೀವ)

೩. **ಜನ್ಮಮುಕ್ತ ಜೀವ.** (ಸ್ವರ್ಗೋನ್ಮುಖ ಜೀವ)

ಸ್ಥಳ:— ಸ್ವರ್ಗ–ಮರ್ತ್ಯಗಳ ನಡುವಿನದೊಂದು ಉನ್ನತ ಪ್ರದೇಶ.

(**ಪ್ರವೇಶ**:— ದೇವದೂತ ಒಂದೆಡೆಯಿಂದ, ಏನೋ ಹುಡುಕಾಡುವವನಂತೆ, ಮೆಲ್ಲನೆ ಸರಿದು ಬರುತ್ತಾನೆ. ಆತ ಹಾಗೆ ಇಳಿದು ರಂಗದ ಮುಂಭಾಗಕ್ಕೆ ಬರುವವರೆಗೂ ತೆರೆಯ ಹಿಂದೆ ಮಂದವಾಗಿ ತಂತುವಾದ್ಯದ ಮಂದಗಂಭೀರವಾದ ಪಾರ್ಶ್ವಸಂಗೀತ ನಡೆದೇ ಇರುತ್ತದೆ. ಪಾರ್ಶ್ವಸಂಗೀತ ನಿಲ್ಲುತ್ತಿರುವಂತೆಯೇ ದೇವದೂತನು ನೆರೆದ ಪ್ರೇಕ್ಷಕರನ್ನು ಉದ್ದೇಶಿಸಿ ಮಾತನಾಡುತ್ತಾನೆ.)

**ದೇವದೂತ**— ಈ ಪ್ರಪಂಚದ ನಿರರ್ಗಳವಾದ ಅವಿಶ್ರಾಂತವಾದ ಅಖಂಡವಾದ ಬಾಳುವೆಯಲ್ಲಿ ಅಳುವಿಗೂ ಸ್ಥಾನವುಂಟು; ನಗುವಿಗೂ ಸ್ಥಾನವುಂಟು. ಉಲ್ಲಾಸದ ಉನ್ಮತ್ತತೆಗೂ ಅವಕಾಶವಿರುವಂತೆಯೇ, ಉನ್ನತವಿಚಾರದ ಉಚ್ಚಭಾವನೆಗಳಿಗೂ ಅವಕಾಶವಿದ್ದೇ ಇದೆ. ಅಳು ನುಂಗಿ ನಗಬಲ್ಲ, ನಗು ನುಂಗಿ ಈ ಜಗತ್ತಿನ ಇಂಗಿತದಲ್ಲಿ ಹೊಗಬಲ್ಲ ಶಕ್ತಿ ಮನುಷ್ಯರಿಗೆಲ್ಲರಿಗೂ ಇಲ್ಲದಿಲ್ಲ.

---

* ಇಲ್ಲಿ ದೇವದೂತ ಗಂಡೆಂದೂ, ಎರಡೂ ಜೀವಿಗಳು ಹೆಣ್ಣೆಂದೂ ಗ್ರಹಿಸಿಕೊಂಡಿದೆ; ಅವಶ್ಯಕಂಡಂತೆ, ಮೂವರನ್ನೂ ಗಂಡೆಂದಾಗಲಿ ಅಥವ ಹೆಣ್ಣೆಂದಾಗಲೀ ಭಾವಿಸಿಕೊಳ್ಳಬಹುದು.

ಆದ್ದರಿಂದ, ನಾವು ಇಂದು ನಿಮ್ಮನ್ನು ನಗೆಯ ನಿಮಿಷದ ಗುಳ್ಳೆಯ ಮೇಲೆ ತೇಲಿಸಲು ಯತ್ನಿಸದೆ, ಈ ಸಂಸಾರದ ಪೊಳ್ಳು ತನ ಎಂತಹದು, ಅದರಲ್ಲಿ ಮೆರೆದಾಡುವ ಮನುಷ್ಯನ ಜೊಳ್ಳುತನ ಎಷ್ಟರದು ಎಂಬುದನ್ನೇ ನಮ್ಮ ಇಂದಿನ ಈ ನಾಟಕದಲ್ಲಿ ನಿಮ ಗೆಲ್ಲ ತೆರೆದು ತೋರಿಸಬೇಕೆನ್ನುತ್ತೇವೆ. ಜಗತ್ತಿನ ಜೀವಾಳಕ್ಕೆ ಜಿಗಳೆಯಂತೆ ಹತ್ತಿಕೊಂಡು ಮಾನವ್ಯದ ಸತ್ವವನ್ನೇ ಹೀರುತ ಲಿರುವ ಮನುಷ್ಯನ ಕ್ಷುದ್ರತನವನ್ನು ಬೈಲಿಗೆಳೆಯುವದೇ ಈ ಆಟದ ಹೂಟ; ಜನ್ಮ-ಪುನರ್ಜನ್ಮಗಳ ಕ್ಷಣಮುಚ್ಚಾಟಿಕೆಯೇ ಈ ನಾಟಕದ ಹಿನ್ನೆಲೆ. ಸರಿ; ನಾವಿನ್ನು ನಮ್ಮ ಆಟವನ್ನು ಆರಂಭಿ ಸುತ್ತೇವೆ.... ಆದರೆ.... .... .... ...., ಈ ನಾಟಕದ ರಂಗಭೂಮಿ ಜಗತ್ತಿನಲ್ಲಿಯದೊಂದು ಸ್ಥಳವೆಂದು ತಿಳಿಯಬೇಡಿರಿ. ಮನುಷ್ಯನ ಹಿಂಸಾಟದ ಆಟಿಗೆಗಳಾದ ತೋಫು, ಗುಂಡು, ವಿಮಾನ, ಅಣು ಬಾಂಬು ಮುಂತಾದವುಗಳು ಬಂದು ತಾಕುವಂತಹದಲ್ಲ ಈ ಸ್ಥಾನ. ಇದು ಮರ್ತ್ಯಲೋಕವನ್ನು ಮೀರಿದವರ ಮಾರ್ಗ; ಸ್ವರ್ಗದ ಕಣಿವೆಯ ದಾರಿ. ಜಗತ್ತಿನಲ್ಲಿ ಜನ್ಮತಾಳಲೋಸುಗ, ಜೀವಗಳು ಸ್ವರ್ಗದಿಂದ ಆ ಭೂಲೋಕಕ್ಕೆ ಹೋಗುವುದೂ ಈ ದಾರಿ ಯಿಂದಲೇ! ಸ್ವರ್ಗಕ್ಕೆ ಹೊರಟ ಜೀವಿಗಳನ್ನು ದೇವದೂತನಾದ ನಾನು ಮೊಟ್ಟಮೊದಲು ಸ್ವಾಗತಿಸುವದೂ ಇಲ್ಲಿಯೇ! ನನ್ನೀ ರಾಜ್ಯ, ಸಾವು-ಹುಟ್ಟುಗಳ ಸಂಗಮ-ಸ್ಥಾನ; ಭೂ-ಸ್ವರ್ಗಗಳ ಸೇತುವೆ.

ಅದೋ, ಮಾತನಾಡುತ್ತಿರುವಷ್ಟರಲ್ಲಿಯೇ ನಮ್ಮ ಆಟದ ಪಾತ್ರಗಳು ಅಣಿಯಾಗಿ ಬಂದವು. ಆದರೆ ಅವರೇನು ಮನುಷ್ಯ ಕೋಟಿಯವರಲ್ಲ. ಅವರು ಕೇವಲ ಎರಡು ಆತ್ಮಗಳು. ಮೊದಲನೆ ಯದು ಭೂಲೋಕದಲ್ಲಿ ಜನ್ಮತಾಳುವದಕ್ಕಾಗಿ ದಾರಿ ಹುಡುಕು ತ್ತಿರುವ ಜೀವ; ಎರಡನೆಯದು ಇದೇ ಈಗ ಆ ಭೂಲೋಕದಲ್ಲಿ ಸತ್ತು, ಸಾವಿನ ಹೆಬ್ಬಾಗಿಲನ್ನು ದಾಟಿ, ಸ್ವರ್ಗವನ್ನು ಶೋಧಿಸು ತ್ತಿರುವ ಜೀವ. ಒಂದನ್ನು ಆ ಜಗತ್ತು ಉಗುಳಿದ್ದರೂ, ಜನ್ಮದ

ಹಂಬಿಲ ಇನ್ನೊಂದು ಜೀವವನ್ನು ಜಗತ್ತಿನಕಡೆಗೆ ಜಗ್ಗುತ್ತಿದೆ. ಹಾಗೆ ನೋಡಿದರೆ, ಜನ್ಮ-ಮರಣಗಳೆರಡೂ ನಿಸರ್ಗದ ನಿಯಮಗಳೇ; ಜನ್ಮ, ಮರಣದ ಕುಡಿ; ಮರಣ, ಜನ್ಮದ ಹೂವು!

ಇರಲಿ, ತಮ್ಮ ತಮ್ಮ ದಾರಿಗಳನ್ನೇ ಹುಡುಕುತ್ತ ಇತ್ತ ಕಡೆಗೇ ಬರುತ್ತಿರುವ ಇವೆರಡೂ ಜೀವಿಗಳಿಗೂ ನೆರವಾಗುವದೇ ದೇವದೂತನಾದ ನನ್ನ ಇಂದಿನ ಆದ್ಯ ಕರ್ತವ್ಯ. ಅದೋ ಆ ಜನ್ಮೋತ್ಸುಕ ಜೀವ ಬಂದೇ ಬಿಟ್ಟಿತು! (ಹೀಗೆನ್ನುತ್ತ ದೇವದೂತ ಮೆಲ್ಲನೆ ಎತ್ತರದ ಸ್ಥಾನಕ್ಕೆ ಹಾರಿ ನಿಲ್ಲುತ್ತಾನೆ; ಕೆಲಕಾಲ ದಾರಿಕಾಯುತ್ತಿರುವಂತೆಯೇ ಮತ್ತೊಂದು ಮೂಲೆಯಿಂದ ಜನ್ಮೋತ್ಸುಕ ಜೀವ ಕತ್ತಲಲ್ಲಿ ದಾರಿ ಹುಡುಕುವವರಂತೆ ಮೆಲ್ಲ ಮೆಲ್ಲನೆ ಸರಿದು ಬರುತ್ತದೆ; ಈ ಮಧ್ಯೆ ಕೆಳಗಣ ಹಾಡು ಪಾರ್ಶ್ವಸಂಗೀತವಾಗಿ ಗಂಭೀರ ಸ್ವರದಲ್ಲಿ ಕೇಳಬರುತ್ತದೆ:—

## ನೇಪಥ್ಯ-ಗೀತ

ಜನುಮ-ಮರಣಗಳ ತಾಲದಲೊಂದು, ನಿ-
ರಂತರ ನಾಟ್ಯವು ನಡೆಯುತಿದೆ।
ನಾಶದ ಶಕ್ತಿಯು ನಷ್ಟಗೊಳಿಸಿ ಈ
ಸೃಷ್ಟಿಯು ದಿವ್ಯತೆ ಪಡೆಯುತಿದೆ ॥
ಬದುಕು-ಸಾವುಗಳು ಸೃಷ್ಟಿಯ ಪಲ್ಲವಿ,
ಉಸಿರುಸಿರುಗಳೇ ಪದಬಂಧ।
ತೀರದ ಹಾಡಿದು ಈ ಸಂಸಾರವು
ಆಸೆಯೆ ಈ ಗಾನದ ಛಂದ ॥

ಗಾನ ಮುಗಿಯುವಷ್ಟರಲ್ಲಿ ಜನ್ಮೋತ್ಸುಕ ಜೀವ ಮುಂದರಿದು ಬಂದು ದಾರಿ ಹುಡುಕಿ ಕೈ ಸೋತು ಒಂದೆಡೆಗೆ ನಿಲ್ಲುತ್ತಾಳೆ.)

•

ಜನ್ಮೋತ್ಸುಕ ಜೀವ— ಅಯ್ಯೊ ತಪ್ಪಿದೆ ತಪ್ಪಿದೆ. ದಾರಿತಪ್ಪಿ ಎಲ್ಲಿಗೋ ಬಂದುಬಿಟ್ಟೆ. ಯಾವ ನಿಟ್ಟು? ಯಾವ ದಾರಿ? ಆ ಭೂಲೋಕವು ಇನ್ನೂ ಎಷ್ಟು ದೂರವೋ ಯಾರು ಬಲ್ಲರು! ಇನ್ನೂ ಹೀಗೆಯೇ ಕಂಗಾಣದೆ ಮುಂದೆ ಸಾಗಬೇಕೋ, ಅಥವ ಹಿಂದಿರುಗಿ ಸ್ವರ್ಗಕ್ಕೆ ಹೋಗಬೇಕೋ ಎಂಬದೂ ತಿಳಿಯದಾಗಿದೆ. ಅಬ್ಬಬ್ಬಾ! ಏನು

ಕತ್ತಲೆಯಿದೂ!! ಒಂದು ಹೆಜ್ಜೆಯಾಚೆಗಿರುವುದೂ ಕಾಣಿಸದಂತಾಗಿದೆ. ಅನಂತ ತೇಜೋಮಯವಾದ ಆ ಸ್ವರ್ಗದ ಸೀಮೆಯನ್ನು ದಾಟಿ ಬಂದದ್ದರಿಂದ ಈ ದಾರಿಯಲ್ಲಿಯ ಕಿರಿಬೆಳಕೂ ನನಗೆ ಕತ್ತಲಾಗಿಯೇ ಕಾಣುತ್ತಿದೆ. ಆಗಲಿ, ಇಲ್ಲಿಯೇ ಸ್ವಲ್ಪ ನಿಂತು ನೋಡುತ್ತೇನೆ. ಅಂದರೆ ಇಲ್ಲಿಯ ಕಿರಿಬೆಳಕಿಗೆ ನನ್ನ ಕಂಣುಗಳು ಅಣಿಗೊಂಡಾವು! (ಸ್ವಲ್ಪ ತಡೆದು ಅತ್ತಿತ್ತ ಇಣಿಕಿದಂತೆ ಮಾಡಿ) ಈಗ ಸ್ವಲ್ಪ ಸ್ವಲ್ಪ ಕಾಣತೊಡಗಿತು; ಕಗ್ಗತ್ತಲೆಯಂತೆ ಇದ್ದಲ್ಲಿ ಈಗ ಮುಸುಕು–ಬೆಳಕು ಕಾಣುತ್ತಲಿದೆ. ಇಲ್ಲಿಯೇ ಹೀಗಾದರೆ ಆ ಭೂಲೋಕದ ಬೆಳಕು ಮತ್ತಿಷ್ಟು ಮಸಕಾಗಿರಬೇಡ! ಇರಲಿ; ಇಲ್ಲಿಯೇ ಇನ್ನಿಷ್ಟು ತಂಗಿಕೊಳ್ಳುತ್ತೇನೆ. (ಆಸರಗೊಂಡಂತೆ ಒರಗಿ ನಿಲ್ಲುವಳು.)

ದೇ. ದೂ.— ಈ ಜೀವ ಇನ್ನೂ ಆ ಸ್ವರ್ಗದ ಜಾಜ್ವಲ್ಯತೆಗೆ ಮರುಳಾದಂತಿದೆ. ಆ ಭೂಲೋಕದ ಕತ್ತಲೆಯ ಕಂಣು ಇವಳಿಗಿನ್ನೂ ಮೂಡಲಿಲ್ಲ; ಆಗಲಿ; ಇವಳಿಗೆ ನಾನೇ ದಾರಿ ತೋರಿಸುತ್ತೇನೆ. (ಮುಂದುವರಿದು ಅವಳ ಹತ್ತರ ಹೋಗುತ್ತಿರಲು, ಅವಳು ಒರಗಿನಿಂತಲ್ಲಿಂದ ಮೆಲ್ಲನೆದ್ದು ಮೊದಲಿಗಿಂತ ಹೆಚ್ಚು ನಿಚ್ಚಳ ನೋಟದಿಂದ ಮುಂದುವರಿಯುವಳು.)

ಜ. ಜೀ.— ಹಾಂ—ಹಾಂ! ಈಗ ಈ ಸುತ್ತಲಿರುವ ದೃಶ್ಯವೆಲ್ಲ ಹೆಚ್ಚು ನಿಚ್ಚಳವಾಗತೊಡಗಿತು. ಆಕಾ ಅಲ್ಲಿ, ಮೇಲೆ ಬಹುದೂರದವರೆಗೆ ಅಪರಂಪಾರವಾಗಿ ಹಬ್ಬಿದ ಆ ಸ್ವರ್ಗಲೋಕದ ಶಿಖರಗಳು ಕಂಗೊಳಿಸುತ್ತಿವೆ. ಇತ್ತಕಡೆಗೆ, ಕೆಳಗೆ ನೋಡಿದರೆ, ಕಣ್ಣಳವನ್ನು ಮೀರಿದ ಅಗಾಧವಾದ ಆಳ. ಆಹಾ! ನಾನು ಎಷ್ಟು ಬೇಗ ನಮ್ಮ ಸ್ವರ್ಗದ ಸೀಮೆಯನ್ನು ದಾಟಿ ಬಂದೆನಲ್ಲಾ! ಇನ್ನು ಆ ಪೃಥ್ವಿ, ಆ ಭೂಲೋಕ, ಇಲ್ಲಿಂದ ಬಹಳ ದೂರವಿರಲಾರದು. ನನ್ನ ಜೀವವಂತೂ ಯಾವಾಗ ಮತ್ತೊಮ್ಮೆ ಆ ಭೂಲೋಕದಲ್ಲಿ ಜನ್ಮ ತಾಳಿಯೇನು ಎಂದು ತವಕಿಸುತ್ತಿದೆ;........ ಆದರೆ, ಆದರೆ, ಆ ಜಗತ್ತಿನಲ್ಲಿ ಮೊದಲಿನ ಸೌಂದರ್ಯ, ಮೊದಲಿನ ಅಂತಃಕರಣ, ಈಗಲೂ ಅಚ್ಚಳಿಯದಿರಬಹುದೇ! ಆಹಾ ಏನು ಆ ಪೃಥ್ವಿಯ

ಅಂದಛಂದ! ಸೂರ್ಯಚಂದ್ರರ ಸೊಬಗೇನು; ಬೆಳದಿಂಗಳ ಕಳೆಯೇನು! ಮಳೆಬಿಲ್ಲಿನ ರಂಗೇನು! ಗಿಡಬಳ್ಳಿಯ ಬೆಡಗೇನು! ಜನ ಜನರಲ್ಲಿಯ ನಗೆಯೇನು!–ನಚ್ಚೇನು! ಹೆಣ್ಣು–ಗಂಡಿನ ಅಚ್ಚೇನು, ಮೆಚ್ಚೇನು!! ಅಷ್ಟು ಚೆಲುವಾದ ಆ ಜಗತ್ತಿನಲ್ಲಿ, ಹಿಂದೆ ಕೃತ ಯುಗದಲ್ಲಿ ನಾನು ಜನ್ಮ ತಾಳಿದಂತೆ, ಈಗಲೂ ಒಮ್ಮೆ ಹುಟ್ಟಿದರೆ ಎಷ್ಟು ಸಂತೋಷ!.... .... ಆದರೆ—ದಾರಿ?— ಎಲ್ಲಿ? ಯಾವ ಕಡೆಗೆ? (ಸುತ್ತಲೂ ನೋಡುತ್ತಿರಲು ದೇವದೂತನನ್ನು ಕಾಣುವಳು; ಅವಳನ್ನೇ ನಿರೀಕ್ಷಿಸುತ್ತಿದ್ದ ಆತನೂ ಅವಳನ್ನು ಸಮೀಪಿಸುವನು.)

ದೇ. ದೂ.— ತಂಗೀ, ನೀನು ಮುಟ್ಟಬೇಕೆನ್ನುವ ಆ ಭೂಲೋಕ, ಇಲ್ಲಿಂದ ಇನ್ನೂ ಮೂರು ದಿನದ ದಾರಿ.

ಜ. ಜೀ.— ಓಹೋ; ದೇವದೂತಾ! ನೀನೇ! ಅಭಿವಂದಿಸುತ್ತೇನಣ್ಣಾ! (ಇಬ್ಬರೂ ವಂದಿಸುವರು) ಈ ಮುಸುಕಿನ ಮುಸುಕಿನಲ್ಲಿ ನಿನ್ನನ್ನು ಬೇಗನೆ ಅರಿಯದೇ ಹೋದೆ. ಅಣ್ಣಾ ದೇವದೂತಾ! ಪುನರ್ಜನ್ಮದ ಹಂಬಲದಿಂದ ನಾನಂತೂ ಆ ಭೂಲೋಕದತ್ತ ಹೊರಟಿದ್ದೇನೆ. ನನ್ನ ಸ್ವರ್ಗದ ಕಣ್ಣುಗಳಿಗೆ ಇಲ್ಲಿಯ ಪ್ರಕಾಶವೂ ಕತ್ತಲಾಗಿಯೇ ಕಾಣುತ್ತಿದೆ. ಕಾರಣ, ಆ ಭೂಲೋಕದ ದಾರಿಯನ್ನಷ್ಟು ತೋರಿಸಿದರೆ ಬಹಳ ಉಪಕಾರವಾದೀತು.

ದೇ. ದೂ.— ಹಾಂ! ನಿನಗೆ ಮತ್ತೆ ಜನ್ಮದ ಆಸೆಯಾಯಿತೇ! ಅದೇಕೆ ತಂಗೀ, ಸ್ವರ್ಗದ ಸುಖದಲ್ಲೇನು ಕಡಮೆಯಾಗಿತ್ತು?

ಜ. ಜೀ.— ದೇವದೂತಾ, ಸ್ವರ್ಗಸುಖದಲ್ಲಿ ಏನೂ ಕಡಮೆಯಾಗಿರಲಿಲ್ಲ; ಹಾಗೆ ನೋಡಿದರೆ, ಅಲ್ಲಿಯ ಸುಖ, ಆನಂದ, ಮಿತಿಮೀರಿ ಹೆಚ್ಚಾಗಿತ್ತು; ತುಂಬಿ ತುಳುಕಿ ಹೊರಸೂಸುತ್ತಿತ್ತು. ಅಂತೇ ಆ ಸ್ವರ್ಗದ ಆನಂದವನ್ನು, ಆ ಭೂಲೋಕದ ಜನರಿಗೂ ಬೀರಿ ಮಾನವರ ಜೀವನವನ್ನು ಉನ್ನತವಾಗಿರಿಸಬೇಕೆಂಬುದೇ ನನ್ನ ಹಂಬಲ! ನೋಡು ದೇವದೂತಾ, ನಾನು ಆ ಜಗತ್ತನ್ನು ಕಾಣದೆ ಎರಡು ಯುಗಗಳಾದುವು. ಆದರೆ ಇತ್ತೀಚೆ ಆ ಜಗತ್ತಿನಿಂದ ಬಂದ ಕೆಲ

ಕೆಲವು ಜೀವಿಗಳು ಹೇಳಿದ ಹಲವೊಂದು ಮಾತುಗಳಿಂದ ನಾನಂತೂ ತಲ್ಲಣಿಸಿದಂತಾಗಿದ್ದೇನೆ.

**ದೇ. ದೂ.**— (ಕುತೂಹಲದ ನಗೆಯಿಂದ) ಏನೇನು ಕೇಳಿರುವೆ ಆ ಭೂಲೋಕದ ಬಗ್ಗೆ?

**ಜ. ಜೀ.**— ಅದೆಲ್ಲಾ ಒಂದು ಕೆಟ್ಟ ಕನಸಿನ ಕತೆಯಂತಿದೆ. ಅಯ್ಯೋ; ಇದೇ ಜಗತ್ತು ಎರಡು ಯುಗಗಳ ಹಿಂದೆ ಎಷ್ಟು ಸುರಮ್ಯವಾಗಿತ್ತು! ಇತ್ತೀಚೆ ಮಾತ್ರ ಅಲ್ಲಿಯ ಜನರಲ್ಲಿ—ಮತ್ಸರ, ದ್ವೇಷ ಎಂಬ ಅವೆಂಥವೋ ಎರಡು ಭಾವನೆಗಳು ಹುಟ್ಟಿಕೊಂಡಿವೆಯಂತೆ; ಅವುಗಳಿಂದ ಸಂಸಾರದ ಬೇರೇ ಸಡಿಲಾಗುತ್ತಿದೆಯಂತೆ. ಜನರಲ್ಲಿ ಶಾಂತಿ-ಸಮಾಧಾನಗಳ ಸುಳಿವೇ ಇಲ್ಲದಂತಾಗುತ್ತಿದೆಯಂತೆ; ಹೀಗೇ ಇನ್ನೂ ಏನೇನೋ ಸುದ್ದಿ ಕೇಳಿದೆ; ನೋಡು ದೇವದೂತ, ನನಗಂತೂ ವಿಶ್ವಾಸವೇ ಆಗಲೊಲ್ಲದು.

**ದೇ. ದೂ.**— ಹಾಗಾದರೆ, ಅದಕ್ಕೆ ಏನು ಉಪಾಯ ಮಾಡಹೊರಟಿದ್ದೀ?

**ಜ. ಜೀ.**— ಅಂತೇ ಸ್ವರ್ಗದಿಂದ ನಾನು ಪ್ರೇಮದ ದಿವ್ಯ ಸಂದೇಶವನ್ನು ತೆಗೆದುಕೊಂಡು ಹೊರಟಿದ್ದೇನೆ. ದೇಶ-ದೇಶಗಳಲ್ಲಿ, ಜನ-ಜನರಲ್ಲಿ, ಬಣ-ಬಣಗಳಲ್ಲಿ, ಹೆಣ್ಣು-ಗಂಡಿನಲ್ಲಿ, ಬಂಧು-ಬಾಂಧವರಲ್ಲಿ ಮತ್ತೆ ಸ್ಥಿರವಾದ ಶಾಂತಿ-ಸಮಾಧಾನ-ಸಮೃದ್ಧಿಗಳು ಹೆಚ್ಚಲೆಂದೇ ನನ್ನ ಬಯಕೆ. ಏನೇ ಇರಲಿ; ಪವಿತ್ರ ಪ್ರೇಮಕ್ಕಂತೂ ಆ ಜಗತ್ತಿನಲ್ಲಿ ಸ್ಥಾನವಿದ್ದೇ ಇದೆಯೆಂದು ನಾನು ಇನ್ನೂ ನಂಬಿದ್ದೇನೆ.

**ದೇ. ದೂ.**— ಏನು ಹುಚ್ಚು-ನಂಬಿಕೆ ನಿನ್ನದು! ಅದಿರಲಿ; ನಿನಗೆ ನಿನ್ನ ದಾರಿ ತೋರಿಸುತ್ತೇನೆ ಬಾ. ಅಗೋ ಅಲ್ಲಿ, ತುಸು ಮುಂದರಿದು ಬಾಗಿ ನೋಡು. ಏನಾದರೂ ಕಾಣುತ್ತದೇನು?

**ಜ. ಜೀ.**— (ಬಹಳ ನಿಟ್ಟಿಸಿ ನೋಡಿ) ಎಲ್ಲಿ; ಎತ್ತ; ಯಾವ ಕಡೆಗೆ? (ಮತ್ತೂ ನಿರೀಕ್ಷಿಸಿ) ಹಾಂ! ಅಲ್ಲೇನು? ರಾಶಿ ರಾಶಿಯಾದ ಚಿಕ್ಕೆಗಳದೊಂದು ಮಹಾಸಾಗರ ಕಾಣುತ್ತಿದೆ! ಸರಿ, ಅವುಗಳಲ್ಲಿ ನಾನು ಜನ್ಮತಾಳಬೇಕೆನ್ನುವ ಆ ಕೀರ್ತಿಶಾಲಿಯಾದ ಮಹಾವೈಭವಶಾಲಿಯಾದ

ಭೂಲೋಕ ಯಾವುದು ? ಆಹಾ, ಅತ್ತ ಅದ್ಭುತವಾದ ಬೆಳಕಿನದೊಂದು ಪ್ರಚಂಡವಾದ ಚೆಂಡಿನಂತೆ ಕಾಣುತ್ತಿರುವದಲ್ಲ; ಅದೇ ಏನು ಆ ಪೃಥ್ವಿ ?

ದೇ. ದೂ.— ಛೀ, ಹುಚ್ಚೀ; ಆ ಭೂಲೋಕಕ್ಕೆಲ್ಲಿಂದ ಬರಬೇಕು ಅಷ್ಟೊಂದು ಬೆಳಕಿನ ಭಾಗ್ಯ! ಈ ವಿಶ್ವದ ಅಸಂಖ್ಯ ಬ್ರಹ್ಮಾಂಡಗಳೆದುರಿಗೆ ಆ ಪೃಥ್ವಿ. ತಾನು ಸಂಸಾರದ ಶಕ್ತಿಗಳನ್ನೆಲ್ಲ ಗೆದ್ದೆ ಗೆದ್ದೆನೆಂದು ಜಂಭಕೊಚ್ಚುವ ಆ ಹುಳ-ಮಾನವನ ಆ ಪೃಥ್ವಿ—ಒಂದು ಗೋಲಿಗುಂಡಿಗಿಂತ ಕಿರಿದು. ವಿಶ್ವದ ವಿಸ್ತಾರದಲ್ಲಿ ಆ ಪೃಥ್ವಿಯೆನ್ನುವುದು ನಿಜವಾಗಿ ಒಂದು ಬಹುಕ್ಷುದ್ರವಾದ ವಸ್ತು. ಈ ಬ್ರಹ್ಮಾಂಡದ ಅಸಂಖ್ಯ ಅಖಂಡ ಜ್ಯೋತಿರ್ಮಂಡಲಗಳಲ್ಲಿ ಆ ಪೃಥ್ವಿ ಕಂಗೊಳಿಸುವುದೂ ಅಸಾಧ್ಯ. ನಿನಗೆ ಕಾಣುತ್ತಿರುವ ಆ ಬೆಳಕಿನ ಹೊಂಡದಂತಿರುವ ವಸ್ತುವಿಗೆ ಆದಿತ್ಯಮಂಡಲ ಅಥವ ಮಹಾಸವಿತೃ ಎನ್ನುತ್ತಾರೆ. ಅಗೋ, ಆ ಆದಿತ್ಯಮಂಡಲದ ಆ ಬದಿಗೆ, ಸ್ವಲ್ಪ ಪೂರ್ವಕ್ಕೆ, ಕಣ್ಣಿಟ್ಟು ನೋಡು. ಆ ಆಕಾಶಗಂಗೆಯ ಅಪಾರವಾದ ಪ್ರಕಾಶದ ಪ್ರವಾಹವನ್ನು ದಾಟಿ ಕಣ್ಚಾಚಿ ನೋಡು; ಈಗೇನಾದರೂ ಕಾಣುವದೇ ?

ಜ. ಜೀ.— (ನೋಡಿ ನೋಡಿ ದಣಿದ ದನಿಯಲ್ಲಿ) ಆ ಆಕಾಶಗಂಗೆಯೇ ಮಸುಕಾಗಿ ಕಾಣುತ್ತಿರುವಾಗ ಅದರಾಚೆಗಿನ್ನೇನು ಕಂಡೀತು, ಬಿಡು!

ದೇ. ದೂ.— ಸರಿ, ನಿನ್ನ ಸ್ವರ್ಗದ ಕಣ್ಣಿಗೆ ಇವೆಲ್ಲ ಮುಸುಕೇ! ಆದರೂ ಇನ್ನಷ್ಟು ನಿಟ್ಟಿಸಿ ನೋಡು; ನೋಟವನ್ನು ದಾಟಿಸಿ, ನಾಟಿಸಿ ನೋಡು.

ಜ. ಜೀ.— (ಮತ್ತೂ ನಿರೀಕ್ಷಿಸಿ) ಓ! ಓಹೋ! ಹೌದು, ಹೌದು, ಎಲ್ಲೋ ಕಗ್ಗವಿಯಲ್ಲಿಯ ಮಿಣುಕಿನಂತೆ ಆ ಕತ್ತಲೆಯಾಳದಲ್ಲಿ ಏನೋ ಒಂದು ಕಿರಿಬೆಳಕು ಕಂಡೂ ಕಾಣದಂತೆ ಮಿಣುಕುತ್ತಿದೆ; ಅದೇ ಅಲ್ಲವೇ ಆ ಮಹಾಪೃಥ್ವಿ!

ದೇ. ದೂ.— ಛೀ, ಹುಚ್ಚೀ! ಅದೂ, ಆ ಪೃಥ್ವಿಯಲ್ಲಿಯ ಮನುಷ್ಯರ ಕಣ್ಣುಕ್ಕಿಸಿ ಕಕ್ಕಸಬಡಿಸುವ ಸೂರ್ಯ!

ಜ. ಜೀ.— (ಉಸಿರೆಳೆಸಿ) ಓ, ಅಯ್ಯೋ; ಆ ಸೂರ್ಯನ ಹಾಡೇ ಹೀಗಾದರೆ, ಇನ್ನು ಆ ಪೃಥ್ವಿಯನ್ನು ಹುಡುಕುವದು ಸ್ವರ್ಗೀಯ ಶಕ್ತಿಯುಳ್ಳ ನಮಗೂ ಅಸಾಧ್ಯವೆಂತ ಕಾಣುತ್ತದೆ.

ದೇ. ದೂ.— ಅಷ್ಟೇಕೆ ಕೈಸೋಲುತ್ತೀ ತಂಗೀ; ಆ ಸೂರ್ಯನೆಂಬುವ ಮಿಣುಕುಬಿಂದುವಿನ ಸುತ್ತಲೂ ಏನೋ ತಿರ್‍ರನೆ ತಿರುಗುತ್ತಿರುವುದು ಕಾಣುವದಲ್ಲವೆ?

ಜ. ಜೀ.— (ಕಣ್ಣಿಟುಕಿಸಿ ಬಹಳ ಶ್ರಮದಿಂದ ನೋಡಿ) ಆಂ, – – – ಹಾಂ! ಹೌದ್ಹೌದು; ಸೂಜಿಯ ಮೊನೆಗಿಂತಲೂ ಚಿಕ್ಕವಾಗಿ ಬೆಳಕಿನ ತುಂತುರ ಹನಿಗಳಂತೆ ಏನೋ ಸ್ವಲ್ಪ ಮುಸುಮುಸುಕಾಗಿ ಕಾಣುತ್ತವೆ.

ದೇ. ದೂ.— ಹಾ! ಅವುಗಳಲ್ಲಿ ಸ್ವಲ್ಪ ದೊಡ್ಡವಾಗಿರುವ ಮೊದಲಿನ ಎರಡನ್ನು ಬಿಟ್ಟು, ಅವಕ್ಕಿಂತ ಕೆಳಗಿರುವ ತೀರ ಚಿಕ್ಕದಾದ ಆ ಮೂರನೆಯದೇ ನೀನು ಜನ್ಮ ತಾಳಬೇಕೆನ್ನುತ್ತಿರುವ ಪೃಥ್ವಿ; ಆ ಮಹಾವೈಭವದ ಭೂಲೋಕ!

ಜ. ಜೀ.— (ಶಕ್ತಿ ಸೋತಂತೆ) ಅಬ್ಬಾ! ಎಷ್ಟು ಕಿರಿದು; ಎಷ್ಟು ಕೀಳು, ಈ ಪೃಥ್ವಿ ಎನ್ನುವದು!! ಆದರೂ ಅದರ ಚೆಲ್ವಿಕೆ, ಅದರ ಹೊಗಳಿಕೆ ಎಷ್ಟು ಹೆಚ್ಚಿನದು, ಮೆಚ್ಚಿನದು!

ದೇ. ದೂ.— ಆದರೆ ತಂಗೀ, ಆ ಚೆಲ್ವಿಕೆಯ ಜ್ವಾಲಾಮುಖಿಯಲ್ಲಿ ದುಃಖದ ಕಿಚ್ಚೆಷ್ಟು ಬಲ್ಲೆಯಾ?

ಜ. ಜೀ.— ಹೌದು ದೇವದೂತಾ; ನೀನು ದುಃಖವೆಂದೊಡನೆ ನೆನಪಾಯ್ತು ನೋಡು; ಅಲ್ಲಾ, ಆ ಜಗತ್ತಿನಲ್ಲಿ ಜನ್ಮಿಸುವದು ಬಹಳ ದುಃಖದಾಯಕವಂತೆ; ಹೌದೇನು?

ದೇ. ದೂ.— ಹುಟ್ಟುವದೂ ಒಂದು ಸೆಳೆತ ತಂಗೀ! ಆ ಜನ್ಮದ ಸೆಳವಿನಲ್ಲಿ ಒಮ್ಮೆ ಸಿಕ್ಕಮೇಲೆ ಅದರ ಎಳೆತವನ್ನು ತಡೆಯುವದೇ ಅಸಾಧ್ಯ! ಹುಟ್ಟು ಎಂಬುವದು ಆಶೆ-ಆಕ್ರೋಶಗಳದೊಂದು ಮೊಟ್ಟೆ.

ಜ. ಜೀ.— ಆದರೇನು ದೇವದೂತಾ; ನನ್ನ ಸ್ಥಿರಸಂಕಲ್ಪದೆದುರು ಆ ಆಶೆ-ಆಕ್ರೋಶಗಳ ಮಾತೇ ಬೇಡ! ಜನ್ಮಸವೆದರೂ ಜಗತ್ತಿನಲ್ಲಿ

ಪ್ರೇಮ ಸವೆಯುದಂತೆ ಮಾಡುವದೇ ನನ್ನ ಗುರಿ; ಅದಕ್ಕೇ ನಾನೀಗ ಆ ಜಗತ್ತಿನಲ್ಲಿ ಜನ್ಮತಾಳಲು ಹೊರಟದ್ದು!

ದೇ. ದೂ.— (ಹುಸಿನಗೆಯಿಂದ) ಹ್ಹ! ಹ್ಹ! ಅದೇನೋ ಅನ್ನುತ್ತಾರಲ್ಲಾ; ಹಾಗಿದೆ ನಿನ್ನ ವಿಚಾರ. ಆಕಾಶ ಕಡಿದು ಬೀಳುವಾಗ ಅಂಗೈ ಯೊಡ್ಡಿದರಂತೆ! ತಂಗೀ, ನಾಯಿಯ ಬಾಲದಂತಹ ಆ ಮನುಷ್ಯನ ಮನಸ್ಸನ್ನು ತಿದ್ದುವ ನಿನ್ನ ಹವ್ಯಾಸದಲ್ಲಿ ನನಗೆ ಏಕೋ ಅಷ್ಟು ಅರ್ಥ ಕಾಣುವದಿಲ್ಲ. ಇಂದಿನ ಜಗತ್ತಿನ ಬಗೆಯನ್ನು ನಾನು ನಿನಗಿಂತ ಹೆಚ್ಚಾಗಿ ಅರಿತಿದ್ದೇನೆ. ಇಂದು, ಆ ಪೃಥ್ವಿಯಲ್ಲಿ, ಮದ-ಮತ್ಸರ, ಅಸೂಯೆ-ಆಕಾಂಕ್ಷೆ, ದ್ವೇಷ-ದ್ವೇಷ, ಮೋಸ-ಮಾಟ ಗಳು ಯಾವ ಮಟ್ಟಕ್ಕೆ ಮುಟ್ಟಿವೆಯೆಂದು ಬಗೆದರೆ ದೇವದೂತ ನಾದ ನನಗೂ ಮೈ ಜುಮ್ಮುದಟ್ಟಿಸುತ್ತದೆ. ತಾ ನಿಂತ ಗಿಡದ ಟೊಂಗೆಯನ್ನು ತಾನೇ ಕಡಿಯಬಹುದೇ! ತಾ ನಂಬಿದ ನೆಲವನ್ನು ತಾನೇ ಕೊರೆಯಬಹುದೇ!! ಆದರೂ ಆ ಗುಬ್ಬಿ-ಮಾನವ ಇಂದು ಇಂತಹ ಕೆಲಸಕ್ಕೇ ಕೈಹಾಕಿದ್ದಾನೆ. ತನ್ನ ಬಾಳುವೆಗೇ ಆಧಾರ ವಾದ ಆ ಪೃಥ್ವಿಯನ್ನೇ ಹಾರಿಸಬಲ್ಲ ಅಣುಬಾಂಬುಗಳನ್ನು ಹುಡುಕುತ್ತಿದ್ದಾನೆ. ಅದು ಬೇಕು, ಇದು ಬೇಕು; ಎಲ್ಲವೂ ತನಗೇ ಬೇಕು ಎನ್ನುತ್ತ, ಆ ಬೇಕಿನ ಬೆಂಕಿಯಿಂದ ಬಾಳುವೆಯನ್ನೇ ಬೇಯಿಸುತ್ತಿದ್ದಾನೆ ಆ ಕುನ್ನಿ-ಮಾನವ! ಎಲ್ಲರನ್ನೂ ಸಂಹರಿಸಿ, ಕೊನೆಗೆ ತನ್ನ ತಲೆಯಮೇಲೆ ತಾನೇ ಕೈಯಿಟ್ಟುಕೊಂಡು ಬೂದಿ ಯಾದ ಆ ಭಸ್ಮಾಸುರನ ಅವತಾರವನ್ನೇ ಇಂದು ಧರಿಸಿದ್ದಾನೆ ಆ ಜಗತ್ತಿನ ಮನುಷ್ಯ! ಇಂದಿನ ಜಗತ್ತಿನಲ್ಲಿ ಮನುಷ್ಯನು ಮಾಡಬಲ್ಲ ರಾಕ್ಷಸೀ ಕೃತ್ಯಗಳನ್ನು ಕಂಡು ರಾಕ್ಷಸರೂ ಭೂತಪಿಶಾಚಿಗಳೂ ನಾಚಿ, ಹೇಸಿ, ಮುಖಮುಚ್ಚಿಕೊಳ್ಳುತ್ತವಂತೆ ತಂಗೀ! ಅಷ್ಟೇ ಏಕೆ, ರಾಕ್ಷಸರ ಜಗತ್ತಿನಲ್ಲಿ ಯಾವನಾದರೂ ಅತ್ಯಂತ ದುಷ್ಕೃತ್ಯ ಮಾಡಿಬಿಟ್ಟರೆ, 'ಥೇ, ಥೇ,— ಅವನೇನು ಶುದ್ಧ ಮನುಷ್ಯನೇ ಆಗಿ ಬಿಟ್ಟ' ಎಂದು ಎಲ್ಲರೂ ತಿರಸ್ಕರಿಸುತ್ತಾರಂತೆ. ಮನುಷ್ಯನ ಘಾತಕಿತನಕ್ಕೆ ಸಿಕ್ಕು ಎಂಥೆಂಥ ಮಹಾನುಭಾವರೂ ಮಣ್ಣು

ಪಾಲಾಗುತ್ತಿದ್ದಾರೆ! ಅಂಥ ಅಸೂಯೆಯ ಅಗ್ನಿಕುಂಡವಾದ ಆ ಪೃಥ್ವಿಗೆ ನೀನು ದೇವಲೋಕದಿಂದ ಒಯ್ಯುವ ದಿವ್ಯಪ್ರೇಮವೆನ್ನುವದು ಹವಿಸ್ಸಿನ ತುಪ್ಪವಾದೀತು ಅಷ್ಟೇ!

**ಜ. ಜೀ.**— ಎಂತಹ ಭೀಕರ ಚಿತ್ರವಿದು! ದೇವದೂತಾ; ಹೂವು ಹಾವಾದಂತೆ, ಹಾಲು ಹಾಲಾಹಲವಾದಂತೆ ನಿನ್ನ ಮಾತಿನ ರೀತಿಯಾಗಿದೆ.

**ದೇ. ದೂ.**— ಇನ್ನೂ ಕೇಳಿಲ್ಲಿ ತಂಗೀ; ಆ ಪೃಥ್ವಿಯ ದೂರದ ಪದರಿನ ಹತ್ತಿರ ಸೇರುವಷ್ಟರಲ್ಲಿಯೇ, ನಿನ್ನ ದಿವ್ಯಪ್ರೇಮವೂ ಪರೆಯಾಗಿ ಹಾರಿಹೋದೀತು. ಇನ್ನೂ ಹತ್ತಿರ ಹೋದಂತೆ, ಮೊದಲು, ಒಂದು ಅರಿಯದ ಬಯಕೆ ನಿನ್ನನ್ನು ಮುಸುಕಿಕೊಳ್ಳುವುದು; ಅದರ ಮೇಲೊಂದು ಆಸೆಯ ಮುಸುಕು; ಅದರ ಮೇಲೊಂದು ಮಹತ್ವಾಕಾಂಕ್ಷೆಯ ಮುಸುಕು; ಅದರಮೇಲೆ, ಉಳಿದವರನ್ನೆಲ್ಲಾ ನೆಲಕ್ಕೊತ್ತಿ ತನ್ನತನವನ್ನೇ ಮೆರೆಸಬೇಕೆಂಬ ದುರಾಗ್ರಹದ ಮುಸುಕು;—ಹೀಗೆ ಒಂದಲ್ಲ, ಎರಡಲ್ಲ; ಹಲವಾರು ಮುಸುಕುಗಳು ಪದರುಪದರಾಗಿ ನಿನ್ನನ್ನು ಆವರಿಸಿಬಿಡುವವು. ಆ ಕಳಚಲಾಗದ ಮೋಹ-ಮಾಟದ ಮುಸುಕು ಕೊನೆಗೆ ತನ್ನ ಸೆಳೆತದಲ್ಲಿ ನಿನ್ನ ದೇವತ್ವವನ್ನೂ, ದಿವ್ಯಪ್ರೇಮದ ಸಂದೇಶವನ್ನೂ ಇಲ್ಲದಂತಾಗಿಸುವದು. ಹೊಗೆ ಮುಸುಕಿದ ಉರಿಯಂತೆ ನೀನು ತೇಜೋಹೀನಳಾಗುತ್ತೀ. ಕೊನೆಗೆ ಆ ಮುಸುಕೇ ನೀನು ಎಂದು ನೀನೇ ತಿಳಿದುಕೊಳ್ಳುವೆ. ಹುಟ್ಟು, ಆಕಾಶದಗಲದ ಎಂತಹ ಪವಿತ್ರಭಾವನೆಗಳನ್ನೂ ಅಟ್ಟಿಸಿಬಿಡುತ್ತದೆ, ತಂಗೀ!

**ಜ. ಜೀ.**— ಛೀ, ಛೀ, ಇದೇನು ಮಾತು ದೇವದೂತಾ! ಕೆಟ್ಟಕನಸಿನ ಹಳವಂಡದಂತೆ ಮಾತನಾಡುತ್ತಿರುವೆ. ಆದರೆ; ನನ್ನಲ್ಲಿ ನನಗೆ ಸಂಪೂರ್ಣ ನಂಬಿಗೆಯಿದೆ. ಆ ಜಗತ್ತು ಹೇಗೇ ಇದ್ದರೂ, ನಾನು ನನ್ನ ದಿವ್ಯ ಸಂದೇಶದಿಂದ, ನನ್ನ ಸಂತತ ಯತ್ನಗಳಿಂದ, ಅದನ್ನು ನಂದನವನದಂತೆ ಮತ್ತೆ ಸುಂದರವಾಗಿಸಬಲ್ಲೆ.

**ದೇ. ದೂ.**— ಹಹ್ಹಂ! ಹ್ಹಂಹ!!— ನಿನ್ನಂಥವರ ನಂಬಿಗೆಯ ತಂಬಿಗೆಗಳು ಅವೆಷ್ಟೋ ಉರುಳಾಡಿ ಹೋದದ್ದನ್ನು ನಾನು ಬಲ್ಲೆ. ಆದರೂ

ನಿನ್ನ ಉತ್ಸಾಹ ನಿನ್ನ ನಂಬಿಗೆಗಳನ್ನು ಇಂಬುಗೆಡಿಸಬೇಕೆಂಬ ಹಂಬಲವೇನಿಲ್ಲ ನನಗೆ. ಒಂದು ವೇಳೆ ನೀನು ನಿನ್ನ ಕಾರ್ಯದಲ್ಲಿ ಯಶಸ್ವಿಯಾದರೆ, ಮನುಷ್ಯ ಮತ್ತೆ ಶಾಂತಿ, ಪ್ರೀತಿ, ಸತ್ಯ, ಸದ್ವರ್ತನೆಗಳ ಮಹತ್ವವನ್ನರಿತುಕೊಂಡರೆ, ಆಹಾ, ಒಂದು ಕೀಳು ಮಿಂಚುಹುಳದಂತೆ ಕಾಣುವ ಆ ಕ್ಷುದ್ರ-ಪೃಥ್ವಿಯು ಕಳೆ ಮತ್ತೆ ಬೆಳಗೀತು. ಅಂತಹ ದಿನ ಬಂದೀತೆ ಎಂದು, ಆ ಜಗತ್ತಿನಿಂದ ಸಾವಿನ ಬಾಗಿಲನ್ನು ದಾಟಿ ಇಲ್ಲಿಗೆ ಬರುವವರೆಲ್ಲರ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತೇನೆ. ಆದರೆ ಎಲ್ಲರೂ ಆ ಪೃಥ್ವಿಯ ಅನೇಕ ಮುಸುಕುಗಳ ಬಣ್ಣ-ಬೆಡಗಿನ ಭಾರದಿಂದ ನರಳುತ್ತ ಬರುವವರೇ! ಆದರೂ ನೀನು ಕೈಕೊಂಡ ಕಾರ್ಯದಲ್ಲಿ ವಿಜಯಿಯಾಗೆಂದು ಹರಸದಿರಲಾರೆ. ಹೋಗು, ಪೃಥ್ವಿಯು ಮತ್ತೆ ಪೃಥುವಾಗಲಿ.

ಜ. ಜೀ.— ಹಾಗಾದರೆ, ನನಗೆ ದಾರಿ ತೋರಿಸು, ದೇವದೂತ!

ದೇ. ದೂ.— ಆಗಲಿ; ಆದರೆ ಅದಕ್ಕಿನ್ನೂ ಸ್ವಲ್ಪ ಅವಕಾಶವಿದೆ. ಅದಕ್ಕೂ ಮೊದಲು ಮಾಡಬೇಕಾದ ಕೆಲಸವಿನ್ನೊಂದು ಇದೆ.

ಜ. ಜೀ.— ಅದೇನು, ದೇವದೂತಾ, ಅಂತಹ ಅಗತ್ಯದ ಕೆಲಸ?

ದೇ. ದೂ.— ಇದೇ ಈಗ ಸಾವಿಗೀಡಾದ ಒಬ್ಬ ಹೆಂಗಸಿನ ಜೀವ, ಭೂಲೋಕದಿಂದ ಹೊರಟು ಸ್ವರ್ಗವನ್ನು ಹುಡುಕುತ್ತ ಇದೇ ದಾರಿಯಿಂದ ಇಷ್ಟರಲ್ಲೇ ಇಲ್ಲಿಗೆ ಬರಲಿದೆ. ನಿನಗೆ ಪೃಥ್ವಿಯ ದಾರಿದೋರುವದಕ್ಕಿಂತ ಮೊದಲು ಅವಳಿಗೆ ಸ್ವರ್ಗದ ದಾರಿದೋರುವದು ನನ್ನ ಇಂದಿನ ಹೆಚ್ಚು ಅಗತ್ಯದ ಕೆಲಸ. ಏಕೆಂದರೆ, ಹೋಗುವಾಗ ಅವಳೂ ನಿನ್ನಂತೆಯೇ ನಿರ್ಮಲಾತ್ಮಳಾಗಿಯೇ ಹೋಗಿದ್ದರೂ ಈಗ ಆ ಭೂಲೋಕದಿಂದ ಹಿಂದಿರುಗಿ ಬರುವಾಗ ಜಡ ಜೀವನದ ಹೊಗೆ–ಮುಸುಕನ್ನು ಹೊತ್ತುಕೊಂಡೇ ಬರುತ್ತಿದ್ದಾಳೆ. ಆ ಪೃಥ್ವಿಯ ಸುಂಕ ಅಂಟಿದ ಮೇಲೆ, ಜೀವಿಗಳು, ದೇಹತ್ಯಾಗ ಮಾಡಿದರೂ ಆ ಮುಸುಕುಗಳ ತ್ಯಾಗ ಮಾಡುವದಿಲ್ಲ. ಅವಳಿಲ್ಲಿ ಬಂದೊಡನೆ ಅವಳ ಮುಸುಕನ್ನು ಕಸಿದು ಮೊದಲಿನ ನಿರ್ಮಲತೆಯಿಂದ ಅವಳನ್ನು ದೇವಲೋಕಕ್ಕೆ ಕಳಿಸುವದೇ ನನ್ನ ಹಿರಿಗೆಲಸ!

ಜ. ಜೀ.— ಹೀಗೇನು? --- ಹಾಗಾದರೆ, --- ನನ್ನದೊಂದು ವಿಚಾರವಿದೆ; ಹೇಳಲೇ!

ದೇ. ದೂ.— ಅದೇನಂಥ ವಿಚಾರ; ಹೇಳು ತಂಗೀ!

ಜ. ಜೀ.— ಅಲ್ಲಾ; ಈಗ ಇಲ್ಲಿಗೆ ಬರಲಿರುವ ಆ ಜೀವದ ಮುಸುಕನ್ನು ಕಳಚುವ ಕೆಲಸವನ್ನು ನನಗೊಪ್ಪಿಸಿದರೆ ನಾನವಳನ್ನು ಒಂದು ನಿಮಿಷದಲ್ಲಿ ಮುಕ್ತಳನ್ನಾಗಿ ಮಾಡುತ್ತೇನೆ.

ದೇ. ದೂ.— ಅಷ್ಟು ಸುಲಭದ ಮಾತಲ್ಲ, ತಂಗೀ, ಅದು!

ಜ. ಜೀ.— ಅದರಲ್ಲೇನಿದೆ ಬಿಕ್ಕಟ್ಟು! ಮಾಯದ ಮುಸುಕನ್ನು ಕಳೆದೊಗೆದು ಸತ್ಯಸ್ವರೂಪಕ್ಕೆ ಬರುವದೆಂದರೆ ಯಾರಿಗೆ ಬೇಡವಾದೀತು? ಕತ್ತಲೆ ಬಿಟ್ಟು, ಬೆಳಕಿಗೆ ಬಾರೆಂದರೆ ಯಾರು ಬರಲಿಕ್ಕಿಲ್ಲ? ಮಣ್ಣು ಬಿಟ್ಟು ಹಣ್ಣು ತಿನ್ನೆಂದರೆ ಯಾರು ಒಪ್ಪಲಿಕ್ಕಿಲ್ಲ?

ದೇ. ದೂ.— ಆದರೆ ತಂಗೀ, ಮಾಯೆ ಮಾಯೆಯೆಂದು ತಿಳಿದರೆ, ಆ ಮಾಯೆ ಎಂದೋ ಮಾಯವಾಗಿರುತ್ತಿತ್ತು. ಮಣ್ಣಿಗೆ ಮೆಚ್ಚಿದ ಮಗು, ಕೈಯಲ್ಲಿ ಹಣ್ಣಿಟ್ಟರೂ ಕಣ್ಣೆತ್ತಿ ನೋಡಲಿಕ್ಕಿಲ್ಲ. ಈ ಮುಸುಕಿನ ಕಸುವು ಅಷ್ಟಿಷ್ಟಲ್ಲ. ಅದರ ಅನುಭವ ನೋಡುವದಿದ್ದರೆ ನಾನು ನಿನ್ನ ಇಚ್ಛೆಗೆ ಒಪ್ಪುತ್ತೇನೆ; ಬೇಕಾದರೆ ಪ್ರಯತ್ನ ಮಾಡಿ ನೋಡು! ಅಕೋ, ನಾನು ಹೇಳಿದ ಜೀವ—ಅಲ್ಲಿ ಬರುತ್ತಲಿದೆ; ಹಳವಂಡವನ್ನು ಹರಿಯಲಾಗದೆ ಅರೆನಿದ್ದೆಯಲ್ಲಿ ಒದ್ದಾಡುವವರಂತೆ ಆ ಜೀವ ತಡಬಡಿಸುತ್ತ ಇತ್ತಕಡೆಗೇ ಬರುತ್ತಲಿದೆ. ಸಾವಿನ ಸೀಮೆ ದಾಟಿದ್ದರೂ ಅದಕ್ಕಿನ್ನೂ ಜನ್ಮದ ಜಿಡ್ಡು ಬಿಟ್ಟಿಲ್ಲ. ಅಕಾ, ಮೊದಲು ಅವಳ ಪರಿಯನ್ನು ಚನ್ನಾಗಿ ಅರಿತುಕೋ! (ಇಬ್ಬರೂ ಮುಂದರಿದು ಬರುತ್ತಾರೆ; ಅಷ್ಟರಲ್ಲಿ ಸ್ವರ್ಗೋನ್ಮುಖ ಜೀವ ನಿದ್ದೆಯಲ್ಲಿ ಅಲೆದಾಡುವವರಂತೆ ಮೆಲ್ಲನೆ ಮುಂದರಿದು ಬರುತ್ತಾಳೆ. ಬಣ್ಣಬೆಡಗಿನ ಚಿತ್ರವಿಚಿತ್ರವಾದ ಮುಸುಕೊಂದು ಅವಳನ್ನು ಪೂರಾ ಮುಚ್ಚಿಬಿಟ್ಟಿದೆ. ಪಾರ್ಶ್ವಸಂಗೀತದ ಹಿಮ್ಮೇಳದೊಡನೆ ಹಾವಭಾವ ಬೆರೆಸಿ ಅವಳು ಹೊಯ್ದಾಡುತ್ತಿರುತ್ತಾಳೆ.)

## ನೇಪಥ್ಯ-ಗೀತ

**ಸಾವಿನ ಮರೆಯೂ ಜನ್ಮದ ಕರೆಯೂ,**
**ಒಂದೇ ಪಯಣದ ತುದಿ ಮೊದಲೂ!**

ದೂರದ ದಾರಿಯ ಏರಿಳಿತದಲೀ
ಪದಪದದಲಿ ತುಂಬಿದೆ ಹುದಲೂ ॥
ಸಾವೆಂಬುವುದೇ ದಿವ್ಯ ಜಾಗೃತೀ,
ಜನ್ಮವೆಂಬುದೇ ಅರೆಮರೆವೂ ।
ಈ ತಿಳಿವೊಂದೇ ಮೊಳೆದು ಬಂದರೇ,
ತಾರತಮ್ಯವೆಂದಿಗು ಬರವೂ ॥

(ನೇಪಥ್ಯಗೀತ ಮುಗಿಯುವ ಹೊತ್ತಿಗೆ ಸ್ವರ್ಗೋನ್ಮುಖ ಜೀವ ರಂಗ-ಮಧ್ಯದ ಮುಂಭಾಗಕ್ಕೆ ಬಂದಿರುತ್ತಾಳೆ.)

ಸ್ವ. ಜೀ.— ಬೇಡ, ಬೇಡ; ಈಗ ನನ್ನನ್ನು ಯಾರೂ ಬಿಟ್ಟುಹೋಗ ಬೇಡಿರಿ; ಇನ್ನೂ ಹತ್ತಿರ ಬನ್ನಿರಿ. ಇಕಾ, ಇಲ್ಲಿ, ನನ್ನ ಹಾಸಿಗೆಯ ಮೇಲೇ ಕುಳಿತುಕೊಳ್ಳಿರಿ. ನನ್ನನ್ನು ಯಾವುದೋ ಶಕ್ತಿ ಮೇಲ ಮೇಲಕ್ಕೆಳೆಯುತ್ತಿರುವಂತೆ ಭಾಸವಾಗುತ್ತಿದೆ. ಆದರೆ, ಛೇಛೇ,ಛೇ; ಇದೆಲ್ಲಾ ಆಭಾಸ ಮಾತ್ರ. ನೀವೆಲ್ಲರೂ ಇನ್ನೂ ಹತ್ತಿರಬಂದರೆ ಈ ಆಭಾಸ ಅಡಗಿಹೋಗುವದು. ತವರ್ಮಾ ಸುರೇಶಾ; ಗೆಳೆಯಾ ಗಿರೀಶಾ; ಇಬ್ಬರೂ ಹತ್ತಿರ ಬನ್ನಿರಿ. ನನ್ನನ್ನು ಇಷ್ಟು ದಿನವೆಲ್ಲ ಸಂತಸಬಡಿಸುತ್ತಿದ್ದ ಇಷ್ಟಮಿತ್ರರೆಲ್ಲರನ್ನೂ ನನ್ನ ಬಳಿಗೆ ಕರೆಯಿರಿ. ನಾನು ನಿಮ್ಮನ್ನು ಬಿಟ್ಟು ಬದುಕಿಯೇನೇ? ನಾನೆಂದೂ ನಿಮ್ಮೆಲ್ಲ ರನ್ನು ಬಿಟ್ಟು ಹೋಗಲಾರೆ,– – ಆಂ– ಆಂ– ಎಲ್ಲಿ?– ಎಲ್ಲಿರುವಳು ಎಲ್ಲರೂ ಎಲ್ಲಿದ್ದಾರೆ? – – (ಅತ್ತಿತ್ತ ಹುಡುಕಿ ಅಲೆದಂತೆ ಮಾಡುವಳು.)

ದೇ. ದೂ.— (ಜ. ಜೀ. ಕ್ಕೆ) ಕೇಳಿದೆಯಾ ತಂಗೀ; ಅವಳಿಗಿನ್ನೂ ಸಂಸಾರದ ಪರೆ ಪೂರಾ ಹರಿದಿಲ್ಲ; ಸತ್ಯದ ತಿಳಿವು ಮೊಳೆದಿಲ್ಲ; ಅಂತೇ ಇನ್ನೂ ಕಳೆದ ಜನ್ಮದ ಕನವರಿಕೆಯಲ್ಲೇ ಇದ್ದಾಳೆ.

ಜ. ಜೀ.— ಸ್ವರ್ಗದ ಸೀಮೆಗೆ ಇಷ್ಟು ಹತ್ತಿರ ಬಂದೂ ಅವಳಿಗೆ ತಿಳಿವುಂಟಾಗದಿರುವುದು ಅಚ್ಚರಿಯಲ್ಲವೇ! ನಿಲ್ಲು; ನಾನೇ ಅವಳನ್ನು ಎಚ್ಚರಿಸುತ್ತೇನೆ.

ದೇ. ದೂ.— (ಮುಂದರಿಯುವವಳನ್ನು ತಡೆಯುತ್ತ) ತಾಳು; ತಾಳು; ಅವಳ ಪರಿಯನ್ನು ಇನ್ನೂ ಅಷ್ಟು ತಿಳಿದುಕೋ!

ಸ್ವ. ಜೀ.— (ಅಲೆಯುತ್ತಿದ್ದವಳು, ಒಂದು ಆಸರಕ್ಕೆ ಆತುಕೊಂಡು) ಈಗ ತಲೆಭಾರ

ಎಷ್ಟೋ ಕಡಿಮೆಯಾದಂತಿದೆ. ನೋವಿನ ನೆನಪೇ ಬಾರದಂತಿದೆ. ಜೀವವನ್ನೇ ತತ್ತರಗೊಳಿಸಿದ ಆ ಜ್ವರದ ಜಳವೇ ಇಲ್ಲದಂತಾಗಿದೆ. ಹಾಗಾದರೆ ನನ್ನ ಜ್ವರ ನಿಂತುಹೋಯಿತೇ; ಹಾ ಇದೇನು? ನಾನು ನನ್ನ ಹಾಸಿಗೆಯ ಮೇಲೆ ಮಲಗಿದಂತಿಲ್ಲವಲ್ಲ! ಈ ವರೆಗೂ ನನ್ನ ಹಾಸಿಗೆಯ ಸುತ್ತಲೂ ಆಳುಮೋರೆ ಮಾಡಿಕೊಂಡು ಕುಳಿತ ನನ್ನ ಬಂಧುಬಳಗದವರೆಲ್ಲಾ ಎಲ್ಲಿ ಮಾಯವಾದರು? ಸಂಸಾರದ ಎಳೆತಗಳೆಲ್ಲ ಕಳಚಿದಂತೆ. ನಾನೆಲ್ಲಿಯೋ ಮೇಲಮೇಲಕ್ಕೇರಿ ಹೋಗುತ್ತಿರುವಂತೆ ಭಾಸವಾಗುತ್ತಿದೆ. ಇದೆಂಥಾ ಕನಸು! ಇದೇನು ಕನಸೋ ನಿಜವೋ! ಹಾ ಹಾ! ನಾನು ಎಲ್ಲಿರುವೆ; ಎಲ್ಲಿಗೆ ಬಂದೆ!

**ದೇ. ದೂ.**— ಈಗ ಮಾತ್ರ ಆವಳಿಗೆ ಎಚ್ಚರ ಹೆಚ್ಚುತ್ತಿದೆ.

**ಸ್ವ. ಜೀ.**— ಹೂಂ ಹೂಂ! ಇದೆಲ್ಲಾ ಕನಸೇ ಇರಬೇಕು! ಹೋಗಲಿ ಈ ಹಾಳ್ಗನಸು! ಬನ್ನಿ ಬನ್ನಿರಿ– ನನ್ನ ನಚ್ಚಿನ ಸ್ನೇಹಿತರೇ, ಬನ್ನಿರಿ! ನಿಮಗೆಲ್ಲಾ ಏನೇನೋ ಹೇಳಿಕೊಳ್ಳಬೇಕೆಂದು ನನ್ನ ಹೃದಯ ತುಂಬಿಬಂದಿದೆ. – – – ನೀವೆಲ್ಲಿದ್ದೀರಿ; ಹತ್ತಿರ ಬನ್ನಿರಿ. ನಮ್ಮಕ್ಕನಿಗೆ ನಾನು ನಾನೂರು ರೂಪಾಯಿ ಕೊಡಬೇಕಿತ್ತು; ನನಗಿಷ್ಟು ಭಯಂಕರ ಜ್ವರ ಬಂತೆಂದು ಆಕೆ ಹೆದರಬಾರದೆಂದು ಹೇಳಿರಿ! ನನ್ನ ಮುದ್ದು ಮಧುಕರ ಪಂಚಗಣಿಯಲ್ಲಿ ಓದುತ್ತಾನಲ್ಲಾ; ಆತ ನನ್ನು ತಪ್ಪದೆ ದೀಪಾವಳಿಗೆ ಕರೆಸೋಣ; ಬನಾರಸದಲ್ಲಿದ್ದ ನನ್ನ ಹಿರಿಮಗಳು–ಪದ್ಮಜಾ—ಚಿಂತಿಸುತ್ತಿರಬಹುದು. ನನ್ನ ಜೀವಕ್ಕೆ ಯಾವ ಅಪಾಯವೂ ಇಲ್ಲೆಂದು ಅವಳಿಗೆ ತಂತಿ ಮಾಡಿರಿ; ಇಲ್ಲವೇ ಟ್ರಂಕ್ ಟೆಲಿಫೋನಿನ ಮೇಲೆ ಅವಳನ್ನು ಕರೆಯಿರಿ; ಅಂದರೆ ನಾನೇ ಅವಳೊಡನೆ ಮಾತನಾಡುತ್ತೇನೆ..... ಆದರೆ.... ನಮ್ಮ.... ಚಂದ್ರಹಾಸ....ಅಮೇರಿಕೆಗೆ ಹೋಗುವವನಿದ್ದ; ಆತನಿಗೆ ನಮ್ಮ ಮಹಾಬಲೇಶ್ವರದ ಬಂಗಲೆಯನ್ನು ಮಾರಿಯಾದರೂ ಹಣ ಕೊಡಬೇಕು. ಹಾಂ!.... ಹಾ! ಹಾ!! ಅಯ್ಯೋ,....ಎಲ್ಲಿ.... ನಿಮ್ಮ ಕೈಯೆಲ್ಲಿ; ನೀವೆಲ್ಲಿ?.... ಇದೇನು? ಮತ್ತೆ ಮೇಲೆ ಹಾರಿದಂತಾಗುತ್ತಿ

ದಲ್ಲಾ! ಆ ಹಾಳುಗನಸು ಮತ್ತೆ ಬಂತೇ! ಅಯ್ಯೋ ಮತ್ತೆ ಅದೇ ಅಂತರಾಳ; ಅದೇ ಶೂನ್ಯತೆ! ಮೇಲಮೇಲಕ್ಕೆ ಯಾರೋ ಎಳೆದಂತೆ, ನಾನು ಏರುತ್ತಿರುವಂತೆ ಭಾಸವಾಗುತ್ತಿದೆ.

ದೇ. ದೂ.— ಆಗೋ, ಅವಳ ಜೀವದ ಜೋಕಾಲಿಯಾಟದ ಜೀಕು ಕಡಮೆಯಾಗುತ್ತ ಬಂತು; ಆದರಿನ್ನೂ ಜನ್ಮದ ಹಳವಂಡ ಪೂರಾ ಹರಿದಿಲ್ಲ.

(ಇಬ್ಬರೂ ಇನ್ನಷ್ಟು ಹತ್ತಿರ ಬಂದು ಅವಳನ್ನು ನಿರೀಕ್ಷಿಸುವರು.)

ಸ್ವ. ಜೀ.— ನಿಜ; ಕನಸು–ಕನಸೇ ಇದು; ಆದರೆ ಯಾವದು ಕನಸು–ಯಾವದು ಎಚ್ಚರಾ! ನಾನು ಯಾವುದೋ ಒಂದು ಹೊಸ ಲೋಕಕ್ಕೆ ಬಂದಂತೆ ಭಾಸವಾಗುತ್ತಿದೆ. ತಲೆ ಹಗುರಾದಂತಿದೆ. ಕಣ್ಣಿಗೊಂದು ಹೊಸ ತಿಳಿವು ಬಂದಂತಾಗಿದೆ.–ಆದರೆ ನನ್ನವರೂ–ನನ್ನ ಜನರು,—ಅವರೆಲ್ಲಾ ಎಲ್ಲಿ ಹೋದರು!....ಎಲ್ಲೋ ಮಂಜಿಸಂತೆ ಕರಗಿಬಿಟ್ಟರಲ್ಲಾ!

ದೇ. ದೂ.— ತಂಗೀ, ಇದೀಗ ಅವಳಿಗೆ ಎಚ್ಚರ ಹೆಚ್ಚು ನಿಚ್ಚಳವಾಯಿತು. ನಿನ್ನಿಚ್ಛೆಯಿದ್ದರೆ ಅವಳ ಮಾಯೆಯನ್ನು ಪೂರಾ ಪರಿಹರಿಸಿ ನೋಡು; ಅವಳನ್ನು, ಆ ಹೊಡೆದ ಮುಸುಕಿನಿಂದ ಮುಕ್ತಳಾಗಿಸಲು ಪ್ರಯತ್ನ ಮಾಡು. (ದೇವದೂತ, ಹಿಂದೆ ಹಿಂದೆ ಸರಿದು ಹೋಗುವನು. ಜನ್ಮೋತ್ಸುಕ ಜೀವ ಸ್ವರ್ಗೋನ್ಮುಖ ಜೀವವನ್ನು ಸಮೀಪಿಸುವಳು.)

ಜ. ಜೀ.— ಅಕ್ಕಾ; ನಾನು ನಿನ್ನ ಸಹಾಯಕ್ಕಾಗಿ ಬಂದಿದ್ದೇನೆ!

ಸ್ವ. ಜೀ.— (ಗರ್ವಗಂಭೀರತೆಯಿಂದ) ಆಂ! ಏನಂದೆ? ಸಹಾಯ! ನನಗೆ ಸಹಾಯ ಮಾಡಬಲ್ಲ ಸಾಹಸವೇ ನಿನ್ನದು? ನಾನೆಂದಿಗೂ ಪರಾವಲಂಬಿಯಾದವಳಲ್ಲ ತಿಳಿಯಿತೆ! ಯಾವಾಗಲೂ ಸ್ವಾವಲಂಬನದ ಅಭಿಮಾನದಲ್ಲೇ ಮೆರೆದವಳು ನಾನು! ಸಾವಿರ ಜನಕ್ಕೆ ಸಹಾಯವಿತ್ತವಳು ನಾನು! ನನಗೆ, ನಿನ್ನ–ನಿನ್ನ ಸಹಾಯವೇ!! ಹ್ಹುಂ ಹು!!....ಆದರೆ ನೀನು ಯಾರು?

ಜ. ಜೀ.— ನಾನೊಂದು ಆತ್ಮ; ಪೃಥ್ವಿಯಲ್ಲಿ ಜನ್ಮತಾಳಲು ಹೊರಟಿದ್ದೇನೆ.

ಸ್ವ. ಜೀ.— ಏನಂದ್ಯೇ!.... ಅಲ್ಲಾ, ನೀನೊಂದು ಆತ್ಮವೇ!

ಜ. ಜೀ.— ಹೌದು; ನಾನು ಆತ್ಮವೇ!

ಸ್ವ. ಜೀ.— ಆತ್ಮವೆಂಬ ವಸ್ತುವೆಲ್ಲಿಂದ ಬಂತು!

ಜ. ಜೀ.— ಅಕ್ಕಾ. ಹಾಗೆನ್ನಬಹುದೇ! ನಾನೇ ನಿನ್ನೆದುರು ನಿಂತಿರುವೆನಲ್ಲಾ; ಈಗಲೂ ನಂಬಲಾರೆಯಾ?

ಸ್ವ. ಜೀ.— ಸುಳ್ಳು; ರೂಪವಿಲ್ಲದ ಆತ್ಮ ಅಶಕ್ಯದ ಮಾತು. ತಂತಿಯಿಲ್ಲದೆ ಸ್ವರವೆಲ್ಲಿ?.... ಆದರೆ.... ನಿನಗೂ ಒಂದು ರೂಪವಿದ್ದಂತೆ ಕಾಣುತ್ತದಲ್ಲಾ; ಇದೇನು?

ಜ. ಜೀ.— ಇದು ರೂಪವಲ್ಲಕ್ಕ; ಇದು ನಾನು ಅಲ್ಲಿ ಆ ಭೂಲೋಕದಲ್ಲಿ ಧರಿಸಬೇಕಾದ ದೇಹದ ಬಿಂಬ ಮಾತ್ರ.

ಸ್ವ. ಜೀ.— ಅಲ್ಲಿ—ಆ—ಭೂಲೋಕದಲ್ಲಿ ಎಂದರೇನು? ನಾವಿರುವುದು ಭೂಲೋಕದಲ್ಲೇ ಅಲ್ಲವೇನು?

ಜ. ಜೀ.— ಅಲ್ಲಾ; ನೀನು ಆ ಭೂಲೋಕವನ್ನು ತ್ಯಜಿಸಿ ಈಗ ಈ ಸ್ವರ್ಗದ್ವಾರಕ್ಕೆ ಬಂದಿರುವೆ!

ಸ್ವ. ಜೀ.— ಅಯ್ಯೋ, ಏನಂದೆ?.... (ಅತಿ ಗಾಬರಿಯಿಂದ) ಸ್ವರ್ಗ! ಇದು ಸ್ವರ್ಗದ ದಾರಿಯೇ? ಹಯ್ಯೋ ಹಾಗಾದರೆ ನಾನು ಸತ್ತಿರುವೆನೇನು? (ಅಳುದನಿಯಲ್ಲಿ) ಇಲ್ಲಿಲ್ಲ; ನಾನು ಸತ್ತಿಲ್ಲ. (ಗಟ್ಟಿದನಿಯಲ್ಲಿ) ಇದ್ದೇನೆ; ಇದ್ದೇನೆ; ನಾನು ಇದ್ದೇ ಇದ್ದೇನೆ.

ಜ. ಜೀ.— ಹೌದಕ್ಕಾ; ನೀನೇನೋ ಇದ್ದೇ ಇರುತ್ತೀ; ಸತ್ತದ್ದು ನಿನ್ನ ದೇಹ ಮಾತ್ರ!

ಸ್ವ. ಜೀ.— ಆಗದು, ಆಗದು; ಆದೆಂದಿಗೂ ಆಗದು; ನಾನು ಮೊದಲಿನಂತೇ ಇದ್ದೇನೆ. ನೋಡಿದೆಯಾ ಈ ನನ್ನ ಬಣ್ಣಬಣ್ಣದ ಮುಸುಕನ್ನು! ಇದು ಇದ್ದಮೇಲೆ ನಾನೂ ಇದ್ದೇ ಇರುವೆ. ಖಂಡಿತ ಸತ್ತಿಲ್ಲ ಬಿಡು!

ಜ. ಜೀ.— ನೀನು, ಆ ನಿನ್ನ ಸತ್ತ ದೇಹವೂ ಅಲ್ಲ; ಈ ಮಾಯೆಯ ಮುಸುಕೂ ಅಲ್ಲ. ನನ್ನಂತೆ ನೀನೂ ಒಂದು ಆತ್ಮ!

ಸ್ವ. ಜೀ.— ನಾನೂ ಒಂದು ಆತ್ಮವೇ?.... (ಅತಿ ದುಃಖದಿಂದ) ಹಾಗಾದರಿನ್ನೇನು! ಹೋಯ್ತು.... ಹೋಯ್ತು.... ಎಲ್ಲಾ ತೊಳೆದು ಹೋಯ್ತು!

ನನ್ನ ಸಂಪತ್ತು, ನನ್ನ ಸೌಂದರ್ಯ, ನನ್ನ ಕೌಶಲ್ಯ,....ಕಷ್ಟಪಟ್ಟು ಗಳಿಸಿದ ಕೀರ್ತಿ—ಎಲ್ಲಾ ಕರಗಿಹೋದುವು! ಸಾವಿರಾರು ಜನರ ಹೊಗಳಿಕೆ ಪಡೆದ ನನ್ನ ಪ್ರಚಂಡ ಬುದ್ಧಿ-ಶಕ್ತಿ, ನನ್ನ ಅಮೋಘ-ವಾದ ವಿಚಾರಸರಣಿ, ಅಯ್ಯೋ—ಅವುಗಳಿಂದ ಈ ಸ್ವರ್ಗದಲ್ಲೇನು ಪ್ರಯೋಜನ! ಹಾಗಾದರೇನು ಅವೆಲ್ಲಾ ಹೋಗಿ ನಾನೂ ಎಲ್ಲರಂತಾದಂತಾಯಿತಲ್ಲ! ಹಾಯ್, ಹಾಯ್, ಇನ್ನೇನು; ಇನ್ನೇನು ಗತಿ! ಒಣ ಒಣ ಆತ್ಮ; ಭಣ ಭಣ ಜೀವ.

ಜ. ಜೀ.— ಅಕ್ಕಾ, ಹಾಗೆನ್ನಬಹುದೇ?.... ಅಕಾ, ನಿನ್ನೆದುರು ಸ್ವರ್ಗದ ಬಾಗಿಲು ತೆರೆದು ನಿಂತಿದೆ; ಹೊರಡಲು ಸಿದ್ಧಳಾಗು!

ಸ್ವ. ಜೀ.— ಹಾಗಾದರೆ ನಿಜವಾಗಿಯೂ ಸ್ವರ್ಗವೆನ್ನುವದುಂಟೇನು? ಯಾವದು? ದಾರಿಯೆತ್ತ? ನನಗೂ ಆದೇಕೋ ಎದೆಯಲ್ಲಿ ಒಂದು ಹೊಸ ಎಳೆತ ಸೆಳೆದಂತಾಗುತ್ತಿದೆ. ಆಗಲಿ. ಕೊನೆಗೆ ಆ ಸ್ವರ್ಗದ ಸವಿಯನ್ನಾದರೂ ನೋಡಿ ಬರುವಾ!

ಜ. ಜೀ.— ಹಾಗಿದ್ದರೆ; ಮೊದಲು ಆ ನಿನ್ನ ಮುಸುಕನ್ನು ಕಳಚಿಬಿಡು! ಕೇವಲ ಆತ್ಮರೂಪಳಾಗು!

ಸ್ವ. ಜೀ.— ಎಂದರೆ?.... ಈ ಮುಸುಕಿಲ್ಲದೆ ನಾನು ಇರುವದಾದರೂ ಹೇಗೆ?

ಜ. ಜೀ.— ಪೃಥ್ವಿಯ ಸೊಗಡು ಹತ್ತಿದ ಆ ಮುಸುಕನ್ನು ಕಳಚದೆ ಸ್ವರ್ಗದಲ್ಲಿ ಯಾರಿಗೂ ಪ್ರವೇಶವೇ ಇಲ್ಲ!

ಸ್ವ. ಜೀ.— ತಂಗೀ, ನಾನು ಬೇರೆ, ಈ ಮುಸುಕು ಬೇರೆ, ಅಲ್ಲವೇ ಅಲ್ಲ. ಇದಿಲ್ಲದೆ ನಾನೇ ಇಲ್ಲ! ಆ ಭೂಲೋಕದಲ್ಲಿ ಇದ್ದಷ್ಟು ದಿನ ನನ್ನ ಬುದ್ಧಿ-ಭಾವನೆಗಳನ್ನೆಲ್ಲ ವೆಚ್ಚಮಾಡಿ ಈ ಮುಸುಕನ್ನು ಹೆಣೆದುಕೊಂಡಿದ್ದೇನೆ. ಈ ಮುಸುಕೇ ನನ್ನ ಜನ್ಮದ, ನನ್ನ ಜೀವಿತದ, ಅಸ್ತಿತ್ವದ ವೈಶಿಷ್ಟ್ಯ! ತಿಳಿಯಿತೇ? ನನ್ನಂತಹ ಮುಸುಕನ್ನು ಪಡೆದವರು ಆ ಪೃಥ್ವಿಯಲ್ಲೇ ದುರ್ಲಭ. ಇದೇ ನನ್ನ ವ್ಯಕ್ತಿತ್ವ, ನನ್ನ ಜೀವನದ ಜೀವಾಳ. ಇಡೀ ಜಗತ್ತಿನಲ್ಲೇ ಅತ್ಯಂತ ಶ್ರೇಷ್ಠ

ನರ್ತಕಿಯೆಂದು ನಾನು ಅಖಂಡ ಕೀರ್ತಿಯನ್ನು ಗಳಿಸಿದ್ದೂ ಇದರ ಬಲದಿಂದಲೇ.

ಜ. ಜೀ.— ಏನಾದರೇನಕ್ಕಾ; ಅದನ್ನು ಕಳಚದೆ ಸ್ವರ್ಗದಲ್ಲಿ ಮಾತ್ರ ಪ್ರವೇಶವೇ ಇಲ್ಲ.

ಸ್ವ. ಜೀ.— ನಿನ್ನ ಮಾತನ್ನೇ ನಾನು ನಂಬಲಾರೆ. ಅಥವ ನಿನ್ನ ಮಾತು ನಿಜವೇ ಇದ್ದರೆ ನನಗೆ ಆ ಸ್ವರ್ಗವೇ ಬೇಡ!

ಜ. ಜೀ.— ನಾನು ಆಗಲೇ ಹೇಳಲಿಲ್ಲವೇನಕ್ಕಾ! ಈ ಮುಸುಕೆಂದರೆ ನೀನಲ್ಲ; ನೀನೊಂದು ಶುದ್ಧಾತ್ಮ! ಇದು ಒಂದು ಆವರಣ ಮಾತ್ರ!

ಸ್ವ. ಜೀ.— ತಪ್ಪು— ಶುದ್ಧ ತಪ್ಪು! ಆ ಜಗತ್ತಿನ ದೃಷ್ಟಿಯಿಂದ ನೋಡಿದರೆ ನಿನ್ನ ಹೇಳಿಕೆ ಪೂರಾ ತಪ್ಪು! ಇಲ್ಲಿ ಕೇಳು; ಇಷ್ಟು ದಿನ ಇದರಿಂದಲೇ ನಾನು ನಾನಾಗಿದ್ದೆ. ಇದರಿಂದಲೇ ನನ್ನ ಕಡೆಗೆ ಕೋಟಿ ಜನರು ಬೆರಳುಮಾಡಿ ತೋರಿಸುವಂತಾಗಿದ್ದೆ. ನನ್ನ ವೈಭವದ, ನನ್ನ ಗೌರವದ, ನನ್ನ ಕೀರ್ತಿಯ ಕಳಸ ಇದು. ಇದೇ ನಾನು; ನಾನೇ ಇದು. ಇದನ್ನೇ ಬಿಟ್ಟುಬಿಟ್ಟರೆ—ನಾನೆಂಬುವದೇನು ಉಳಿದಂತಾಗುವದು? ನನ್ನ ಜೀವನದ ಹಲವು ಕನಸು-ಕನವರಿಕೆ, ಹಂಬಲ-ಹಾರೈಕೆ, ಆಸೆ-ಆಕಾಂಕ್ಷೆ, ಪ್ರಯತ್ನ-ಫಲಸಿದ್ಧಿಗಳ ಕುರುಹು ಇದು. ಇದನ್ನೇ ತೊರೆದರೆ ಹಲವು ಹುಲುಮಾನವರಂತೆ ನಾನೂ ಒಬ್ಬಳಾಗಿ ನನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡು ಜನದ ಜಂಗುಳಿಯಲ್ಲಿ ಬೆರೆದುಹೋಗುವದೇ ಸರಿ! ಪುರುಷಾರ್ಥದ ಪ್ರತೀಕವಾದ ಇದನ್ನು ನಾನು ಬಿಟ್ಟಿದ್ದರೆ, ಸೂರ್ಯನಂತೆ ಮೆರೆಯುವ ಬದಲು ಒಂದು ಕಿರಿ-ಚುಕ್ಕೆಯ ಕುಡಿಬೆಳಕಾಗಿ ನಾನೂ ಅಡಗಿಹೋಗುತ್ತಿದ್ದೆ. ಇಲ್ಲಿ ಕೇಳು ತಂಗೀ; ಆ ಪೃಥ್ವಿಯಲ್ಲಿ ಹೊಸದಾಗಿ ಜನ್ಮವೆತ್ತಬೇಕೆನ್ನುವ ನೀನು ಈ ಮುಸುಕಿನ ಮಹತ್ವವನ್ನು ಅಲ್ಲಗಳೆದರೆ ಅಲ್ಲಿ ನಿನ್ನ ಬಾಳು ನಾಯಿಬಾಳಾದೀತು. ನೆನಪಿರಲಿ, ತಂಗೀ ನೆನಪಿರಲಿ; ಜಗತ್ತೊಂದು ಜಾತ್ರೆ ಮಾತ್ರ!

ಜ. ಜೀ.— ಹಾಗೆಂದರೇನಕ್ಕಾ; ಒಡಪಾಗಿದೆ ನಿನ್ನ ಮಾತಿನ ರೀತಿ.

ಸ್ವ. ಜೀ.— ಒಡಪಲ್ಲ ತಂಗೀ; ಅದು ಒಡೆದುಕಾಣುವ ಸತ್ಯ; ಕೇಳಿಲ್ಲಿ,—

ಅಕ್ಕಾ, ಆ ಜಗತ್ತೆಂದರೆ ಏರಾಟ ಮೇಲಾಟಗಳ ಜೂಜುಗಾರಿಕೆಯು ದೊಂದು ಜಾತ್ರೆ! ಆದರಲ್ಲಿ ಬಾಳಿ ಬದುಕಿ ಜಯಿಸಬೇಕಾದರೆ, ಎಲ್ಲರ ತಲೆಮೀರಿ ನಿಲ್ಲಬೇಕಾದರೆ, ಇಂಥದೊಂದು ಆವರಣ ಅತ್ಯವಶ್ಯ. ನೀನೂ ಎಲ್ಲರಂತೇ ಇದ್ದರೆ ನಿನ್ನನ್ನು ಕೇಳುವರಾರು ಆ ಜಗದಲ್ಲಿ! ಪ್ರತಿಯೊಂದು ಪಿಳ್ಳೆಯೂ ನಿನ್ನನ್ನು ದಬ್ಬಿ, ಬದಿಗೊತ್ತಿ ಬೆಂಡುಮಾಡುವದು! ಬಾಳಿಂತ ಬಾಳಿಲ್ಲಿ ನೀನು ಹೆರವರ ನೆರಳಾಗಿ, ಹೇಳಹೆಸರಿಲ್ಲದಾಗಿ, ಇರಬೇಕಾದೀತು; ತಿಳಿಯಿತೇ? ಆ ಜಗತ್ತಿನ ಜಂಗುಳಿ ಮಹತ್ವ ಕೊಡುವದು ನಿನಗಲ್ಲಾ; ನೀನು ಹಾಕಬಲ್ಲ ಸೋಗಿಗೆ!

ಜ. ಜೀ.— ಹಾಗಾದರೆ, ಆ ಜಗತ್ತಿನ ಜನರು ಮೊದಲಿನಂತೆ ಈಗಲೂ ಒಬ್ಬರಿಗೊಬ್ಬರು ನೆರವಾಗಿ ನಡೆದುಕೊಳ್ಳುವದಿಲ್ಲವೇನು?

ಸ್ವ. ಜೀ.— ಎಂಥ ಮೂಢಳು ನೀನು! ಹಾಗಾದರೆ, ಎಲ್ಲರೂ ಸರಿಸಮಾನರಾಗಿ, ಪದವಿ, ಅಂತಸ್ತು, ಗೌರವ, ಕೀರ್ತಿ, ವೈಭವಗಳಿಗೆ ಅರ್ಥವೇ ಇಲ್ಲದಂತಾಗುವದು! ಕೀರ್ತಿ ವೈಭವಗಳಿಲ್ಲದೆ ಪುರುಷಾರ್ಥವೆಲ್ಲಿಯದು? ಹ್ಞಂ! ಹ್ಞಂ! ನಿನ್ನಂಥ ತಿಳಗೇಡಿ ಆ ಜಗತ್ತಿನಲ್ಲಿ ಹೊಕ್ಕರೆ ತೋಳಗಳ ನಡುವೆ ಕುರಿಮರಿ ಸಿಕ್ಕಂತಾದೀತು.

ಜ. ಜೀ.— ಏನಾಶ್ಚರ್ಯ; ಎಷ್ಟು ಕಟುವಾದ ಮಾತಿದು! ಅಲ್ಲವಕ್ಕಾ, ಮನುಷ್ಯತ್ವಕ್ಕೆ ಸಹಜ ಸ್ವಾಭಾವಿಕವಾದ ಪ್ರೇಮವಾದರೂ ಜಗತ್ತಿನಲ್ಲಿ ಈಗ ಉಳಿದಿಲ್ಲವೇ?

ಸ್ವ. ಜೀ.— ತಂಗೀ ನಾನು ನಿನಗಿನ್ನೆಷ್ಟು ಒಡೆದು ಒಡೆದು ಹೇಳಲಿ! ಜಗತ್ತಿನಲ್ಲಿ ಸಜ್ಜನಿಕೆ, ಸಾತ್ವಿಕತೆ, ಸತ್ಯ, ಸ್ವಾತಂತ್ರ್ಯ, ಸಮಾನತೆ, ಸಹಕಾರಗಳೂ, ಪ್ರೀತಿ ನೀತಿಗಳೂ ಬೇಕಾದಷ್ಟಿವೆ;—ಕೇವಲ ಹೆಸರಿನಲ್ಲಿ ಮಾತ್ರ; ನಿಜವಾಗಿ ಅಲ್ಲಾ; ಆದರೆ ಸೋಗಿನಲ್ಲಿ! ಇಂದಿನ ಜಗತ್ತಿನಲ್ಲಿ ಸಜ್ಜನಿಕೆಯಿಲ್ಲಾ; ಸಜ್ಜನಿಕೆಯ ಸೋಗಿದೆ; ಸತ್ಯವಿಲ್ಲಾ; ಸತ್ಯದ ಸೋಗಿದೆ. ಪ್ರೀತಿಯಿಲ್ಲಾ; ಪ್ರೀತಿಯ ಸೋಗಿದೆ. ಆ ಹಲವು ಬಣ್ಣ ಬೂಟಾಟಿಕೆಗಳ ಸೋಗಿನ ಪದರು

ಪದರು ಸೇರಿ ಆದ ಕೌದಿಯೇ ಈ ಬೆಡಗಿನ ಮುಸುಕು.— ಇದನ್ನರಿತುಕೋ ತಂಗೀ!.... ಪ್ರೇಮವಂತೆ ಪ್ರೇಮ! ಅದೊಂದು ಬಾಲಚಿಕ್ಕೆಯಂತೆ ಬೆಳಗಿ ಅಡಗುವ ವಸ್ತು ಅಷ್ಟೇ!

ಜ. ಜೀ.— ಹಾಗಾದರೆ, ಆ ಜಗತ್ತಿನಲ್ಲಿ ಹಿಂಸೆ, ಕೊಲೆ, ಸುಲಿಗೆ, ಸ್ವೈರಾಚಾರಗಳಿಗೆ ಮಿತಿಯೇ ಇರಲಿಕ್ಕಿಲ್ಲ.

ಸ್ವ. ಜೀ.— ಅದಕ್ಕೇನು; ಕೇಳುವದೇ ಬೇಡ! ಗೇಣು ನೆಲಕ್ಕಾಗಿ, ಹಿಡಿ ಹೊನ್ನಿಗಾಗಿ ದೇಶದೇಶಗಳೇ ಪರದೇಶಿಯಾಗುತ್ತಿವೆ. ಎಲ್ಲಿ ನೋಡಿದಲ್ಲಿ ಯುದ್ಧ, ಯುದ್ಧ!

ಜ. ಜೀ.— ಹಾಗಾದರಲ್ಲಿ ಶಾಂತಿಯೆನ್ನುವುದೂ....

ಸ್ವ. ಜೀ.— ಎರಡು ಯುದ್ಧಗಳ ನಡುವಿನ ಸ್ಮಶಾನ ಶಾಂತಿಯೇ ಶಾಂತಿ! ನೋಡು ತಂಗೀ; ಮಳೆ ನಿಂತಮೇಲೆ ಮರದ ಹನಿ; ಹುಲಿ-ಸಿಂಹಗಳ ಎಂಜಲ ನಾಯಿ-ನರಿಗಳಿಗೆ ಪ್ರಸಾದ; ಹಾಗಿದೆ ಜಗತ್ತು! ಯುದ್ಧಕಾಲದಲ್ಲಿ ಸರಕಾರಗಳು ಸ್ವಾರ್ಥ ಸಾಧಿಸುತ್ತವೆ; ಶಾಂತಿಕಾಲದಲ್ಲಿ ವ್ಯಕ್ತಿಗಳು ಸ್ವಾರ್ಥ ಸಾಧಿಸುತ್ತಾರೆ;— ಮುಂದಿನ ಯುದ್ಧಕ್ಕಾಗಿ ಹೊಲ ಹರಗುತ್ತಾರೆ.

ಜ. ಜೀ.— ಅಯ್ಯೋ, ಹೀಗಾದರೆ ಜಗತ್ತು ಮುಂದರಿಯುವದಾದರೂ ಹೇಗೆ?

ಸ್ವ. ಜೀ.— ಆದರಗೊಡವೆ ಯಾರಿಗೆ!

ಜ. ಜೀ.— ಏನೇ ಆಗಲಿ; ಜಗತ್ತಿನಲ್ಲಿ ದಯಾ-ನ್ಯಾಯಗಳಾಗಲೀ ಪೂರಾ ಅಡಗಿರಲಿಕ್ಕಿಲ್ಲವಲ್ಲವೇ?

ಸ್ವ. ಜೀ.— (ಹುಸಿನಗೆಯಿಂದ) ಅದೇಕೋ! ದಯೆ-ನ್ಯಾಯಗಳನ್ನು ನೆಚ್ಚಿ ಧೂಳಿಯಂತಾಗಲು ಮನುಷ್ಯನಿಗೇನು ಹುಚ್ಚು ಹಿಡಿದಿದೆಯೇ? ಮನುಷ್ಯನಿಗೆ ಬೇಕಾದದ್ದು—ಪದವಿ, ಮುಂದಾಳ್ತನ, ಅಧಿಕಾರ, ನಾಲ್ಕು ಜನರ ನೆತ್ತಿ ಅರೆಯುವ ಗಟ್ಟಿಗತನ; ಹಲವರು ಹೊಗಳಬಹುದಾದ ಹೆಚ್ಚಳ; ಆಳುವ ಛಲ; ಅದುಮುವ ಬಲ!!

ಜ. ಜೀ.— ನಿನ್ನ ಮಾತಿನಿಂದ, ಪವಿತ್ರಪ್ರೇಮವನ್ನೇ ನಂಬಿದ ನನಗೂ ನಡುಕವುಂಟಾಯಿತು ನೋಡು.

ಸ್ವ. ಜೀ.— ನಿಜ, ನಿಜ; ನಿನ್ನ ಭಯವೇನು ನಿಷ್ಕಾರಣವಲ್ಲ; ವಸ್ತುಸ್ಥಿತಿಯೇ ಹಾಗಿದೆ. ಆ ಜಗತ್ತಿನಲ್ಲಿ ಪ್ರೇಮವೂ ಕೂಡ ಒಂದು ಅಲಂಕಾರವೆಂಬದನ್ನು ಮರೆಯಬೇಡ. ಅಲ್ಲಿಯ ಜನರು ಅದಕ್ಕೆಷ್ಟು ಬೆಲೆ ಕೊಡುತ್ತಾರೋ, ಅದಕ್ಕಿಂತ ಸ್ವಲ್ಪ ಕಡಮೆ ಬೆಲೆಕೊಟ್ಟವನೇ ಹೆಚ್ಚಿನ ಜಾಣ! ಅಲ್ಲಿ ಕಪಟತನಕ್ಕೇ ಜಾಣತನವೆಂದು ಹೆಸರು; ಘಾತುಕತನಕ್ಕೆ ಅಲ್ಲಿ ಯುಕ್ತಿ ಎಂಬ ಅನ್ವರ್ಥಕನಾಮ. ಕೈಯಲ್ಲಿ ಕಸುವಿದ್ದಷ್ಟೂ ಎದೆಯಲ್ಲಿ ಕಠೋರತೆಯಿದ್ದವನೇ ದೊಡ್ಡವ ಆ ಜಗತ್ತಿನಲ್ಲಿ. ಅಂಥವನನ್ನೇ ಜನವೆಲ್ಲ ಮೆಚ್ಚುವದು, ನೆಚ್ಚುವದು; ಹೆಚ್ಚಿಸುವದು. ದುಡ್ಡಿದ್ದವನೇ ದೊಡ್ಡವನೆಂಬ ಮಾತೂ ಈಗ ಹಳೆಯದಾಗಿದೆ. ಈ ಇಪ್ಪತ್ತನೇ ಶತಮಾನದಲ್ಲಿ ಪ್ರಬಲನೇ ಪಂಡಿತ, ಬಲವಂತನೇ ಬಲ್ಲಿದ, ಎಂದು ಸರ್ವಸಮ್ಮತವಾಗಿದೆ. ಎಲ್ಲೆಲ್ಲಿ ನೋಡಿದರೂ ಜನರು ಬಲದ ಬೆಂಬತ್ತಿ ಜಿದ್ದಿನಿಂದ ಏಂಾಟಕ್ಕೆ ನಿಂತಿದ್ದಾರೆ; ಬಲ! ಬಲ! ಬಲವೇ ಇಂದಿನ ಜಗತ್ತಿನ ತಳ! ಸಂಪತ್ತು ಕೂಡ ಆ ಬಲದ ತೊತ್ತು. ಮೆತ್ತಗಿದ್ದವರನ್ನು ಒತ್ತಿ, ಬಲಹೀನರನ್ನು ಬಲಾತ್ಕರಿಸಿ, ಅನ್ಯಾಯದ ಅಗಾಧ ಅನುಭೋಗಕ್ಕೆ ಅವರನ್ನು ಗುರಿಯಾಗಿಸಿ ತನ್ನ ಮಹತ್ವಾಕಾಂಕ್ಷೆಯನ್ನು ಸಿದ್ಧಿಸಿಕೊಂಡವನೇ ಗೆದ್ದ ಇಂದಿನ ಜಗತ್ತಿನಲ್ಲಿ; ಅವನೇ ಜಗದ್ವಂದ್ಯ! ಜನತಾಪ್ರಿಯ! ತಿಳಿಯಿತೇ ತಂಗೀ! ಅಂತೇ ಆ ಜಗತ್ತಿನಲ್ಲಿ ತಾಳಬಾಳುವ ಹವಣಿಕೆ ನಿನಗಿದ್ದರೆ, ನೀನೂ ನನ್ನಂತೆ ಒಂದು ಮುಸುಕನ್ನು ಹೆಣೆದುಕೋ! ಜನರ ಕಣ್ಣುಗಳಲ್ಲಿ ಹೊಳೆ; ಅವರ ಮನವನ್ನು ಸೆಳೆ; ಸೋಗಿಗೆ ಬಾಗುವದೀ ಜಗತ್ತು! ಅದನ್ನು ಮರೆಯಬೇಡ ತಂಗೀ. ಪ್ರಬಲತೆಯ ಗುಟ್ಟು, ಇಕಾ, ಈ ಮುಸುಕಿನಲ್ಲಿದೆ. ಆ ಜಗತ್ತಿನಲ್ಲಿ ಇಲ್ಲವೆ ಆಳಬೇಕು; ಇಲ್ಲವೇ ಆಳಾಗಿರಬೇಕು; ಮೂರನೇ ಮಾರ್ಗವೇ ಇಲ್ಲ! ಅದ್ದರಿಂದ ಆರಂಭದಿಂದಲೇ ಆಳಬಲ್ಲ ಬಲವನ್ನು ಬೆಳೆಸಿಕೋ ತಂಗೀ! ನಿನ್ನಿಚ್ಛೆಯನ್ನು ಬೇರೆಯವರ ಮೇಲೆ ಹೇರಲು ತಡಮಾಡಿದರೆ, ಹೆರವರಿಚ್ಛೆಗೆ ನೀನೇ ಬಾಗಬೇಕಾದೀತು. ಇದು ಅಖಂಡ-ಖಂಡಿತವಾದ

ಸತ್ಯ. ಹೃದಯವನ್ನು ಬತ್ತಿಸಿಬಿಡು; ಕನಿಕರವನ್ನು ಕರಗಿಸಿಬಿಡು; ಬೇಕಾದ್ದನ್ನು ಬಗೆದುಕೋ; ಕೈಗೆ ಬಂದದ್ದನ್ನು ಕಿತ್ತಿಕೋ; ಕಿತ್ತಿಕೊಂಡದ್ದನ್ನು ಕಾಪಾಡಿಕೋ; ಎದುರಿಸಿದವರನ್ನು ಬದಿಗೊತ್ತು; ನಮಿಸಿದವರನ್ನು ನೆಲಕ್ಕೊತ್ತು; ಹಲವರ ಹೆಗಲುಮೆಟ್ಟಿ ಮೇಲೇರಿ ನಿಂತರೇ ನಿನ್ನ ಬಾಳು ತಾಳೀತು; ನಾಲ್ವರು ಹೌದೆಂದಾರು; ಶ್ರೇಯ ಸೋಬಾನ ಹಾಡೀತು; ಪೌರುಷದ ಪರಮಾವಧಿಯಾದೀತು; ಸಂಸಾರ ಸಿಂಗರದ ನೆಲೆಯಾದೀತು; ಸುಖದ ಸೆಲೆಯಾದೀತು! ಇದನ್ನು ಬಿಟ್ಟರೆ ಇನ್ನೊಂದು ದಾರಿಯೇ ಇಲ್ಲ, ತಂಗೀ, ಇಂದಿನ ಜಗತ್ತಿನಲ್ಲಿ!

ಜ. ಜೀ.— ಹಾಯ್; ಹೀಗಿರುವದೇ ಇಂದಿನ ಜಗತ್ತು! ಅಕ್ಕಾ; ನಿಜವಾಗಿಯೂ ಈ ಮುಸುಕಿನಲ್ಲಿ ಇಷ್ಟು ಶಕ್ತಿಯಿರುವದೇ?

ಸ್ವ. ಜೀ.— ಈಗ ಹೊಳೆಯಿತೇ ನಿನಗೆ ಈ ಮುಸುಕಿನ ಮಹಿಮೆ! ಇನ್ನಾದರೂ ನನ್ನ ಹೇಳಿಕೆಯನ್ನು ಮರೆಯಬೇಡ ಕಂಡಿಯಾ! ಆಗಲಿ; ಸರಿ ಸಧ್ಯ; ನನಗೆ ಸ್ವರ್ಗದತ್ತ ಹೋಗಗೊಡು.

ಜ. ಜೀ.— (ಅಡ್ಡಗಟ್ಟಿ) ಆದಾಗದು. ಆ ಜಗತ್ತಿನಲ್ಲಿ ಈ ಮುಸುಕಿಗೆ ಎಷ್ಟೇ ಮಹತ್ವವಿದ್ದರೂ, ಅದನ್ನು ಬಿಸುಟಿಹಾಕುವವರೆಗೆ ನಿನಗೆ ಈ ಸ್ವರ್ಗದ್ವಾರದಲ್ಲಿ ಸಹ ಪ್ರವೇಶವಿಲ್ಲ! ಮೊದಲು ಅದನ್ನಿಲ್ಲಿ ಕಳಚಿಟ್ಟು ಬಿಡು, ನೋಡುವ!

ಸ್ವ. ಜೀ.— (ಇಂಗಿತವಾಗಿ) ಹಾ! ಹಾ! ನಿನ್ನ ಗತ್ತು ನಿನ್ನ ಕುಯುಕ್ತಿ, ನನಗೇನು ತಿಳಿಯಲಿಕ್ಕಿಲ್ಲವೆಂದೆಯೇನು? ಕೊನೆಗೆ ನೀನೇ ಇದರ ಮೇಲೆ ಕಣ್ಣಿಟ್ಟಿಯಲ್ಲವೇ! ಹುಂ! ಹುಂ! ನಾನು ನಿನ್ನನ್ನು ಎಷ್ಟು ಸರಳ ಹುಡುಗಿಯೆಂದು ತಿಳಿದಿದ್ದೆನಲ್ಲಾ! ನನ್ನಿಂದ ಇದನ್ನು ಬಿಡಿಸಿ, ನೀನಿದನ್ನು ಪಡೆದುಕೊಂಡು, ಆರಂಭದಿಂದಲೇ ಆ ಜಗತ್ತಿನಲ್ಲಿ ಮೆರೆಯಬೇಕೆಂದು ನೀನು ಎಣಿಸಿರಬೇಕು. ಆ ಜಗತ್ತಿನ ಎಂಥೆಂಥ ಕಪಟಿಗಳ ಕಾರಸ್ಥಾನಕ್ಕೂ ಕೈಸೋಲದ ನಾನು ನಿನಗೆ ಸೋತೇನೆ! ಬಿಡು, ಸರಿಯತ್ತ!! (ಅವಳನ್ನು ಬದಿಗೊತ್ತಿ

ಮುಂದರಿಯುವಳು; ಅಷ್ಟರಲ್ಲಿ ದೇವದೂತ ಎದುರುಬಂದು ಅವಳನ್ನು ಅಡ್ಡ ಗಟ್ಟುವನು.)

**ದೇ. ದೂ.**— ಏನಮ್ಮಾ ಎಲ್ಲಿಗೆ ಹೋಟಿ! ಯಾವ ಕಡೆಗೆ ಪ್ರಯಾಣ?

**ಸ್ವ. ಜೀ.**— ನಾನು ಸ್ವರ್ಗದ ಯಾತ್ರಿಕಳು; ಸಂಸಾರವನ್ನು ಜಯಿಸಿ ಬಂದವಳು ನಾನು! ದಾರಿ ಬಿಡು!

**ದೇ. ದೂ.**— ನಾನು ನಾನು ಎಂಬ ಈ ಹೆಮ್ಮೆಯ ಹೊರಮುಸುಕು ಹೊದ್ದಿರುವವರೆಗೆ ನಿನಗೆ ಸ್ವರ್ಗದ ಬಾಗಿಲು ತೆರೆಯಲಾರದು ಮಗಳೇ!

**ಸ್ವ. ಜೀ.**— ಎಲಾ, ನೀನೂ ಅವಳಂತೆಯೇ ಹೇಳುತ್ತೀಯಲ್ಲಾ! ಈ ಮುಸುಕನ್ನೇ ಬಿಟ್ಟರೆ ನಾನು ನನ್ನ ವೈಶಿಷ್ಟ್ಯ ವ್ಯಕ್ತಿತ್ವಗಳನ್ನು ಸ್ವರ್ಗದಲ್ಲಿ ಮೆರೆಸುವದಾದರೂ ಹೇಗೆ? ಆ ವೈಶಿಷ್ಟ್ಯ-ವ್ಯಕ್ತಿತ್ವ ಗಳನ್ನೇ ಕಳೆದುಕೊಂಡರೆ ನಾನು ಆ ಸ್ವರ್ಗಕ್ಕೆ ಹೋಗಿ ಪಡೆಯುವ ಫಲವೇನು?

**ದೇ. ದೂ.**— ಸ್ವರ್ಗ ಫಲದ ನೆಲವಲ್ಲ, ಮಗಳೇ; ಅದು ನಿನ್ನ ಸ್ವ-ಸ್ಥಾನ; ಶುದ್ಧಾತ್ಮಗಳ ತವರೂರು! ವ್ಯಕ್ತಿತ್ವ-ವೈಶಿಷ್ಟ್ಯಗಳು ಬರೀ ನೆಳಲು; ಮಂಜಿನ ನೆಳಲು. .ಆ ಮುಸುಕನ್ನೊಗೆದು ನೀನು ನಿನ್ನ ನಿಜ ರೂಪದಲ್ಲಿ ಬಂದರೇ ನಿನಗೀ ಸ್ವರ್ಗದಲ್ಲಿ ಸ್ವಾಗತವಿದೆ!

**ಸ್ವ. ಜೀ.**— ಎಲ, ಎಲ; ನೀನೂ ಆ ಜಗತ್ತಿನಲ್ಲಿ ಜನ್ಮತಾಳಲು ಹೊರ ಟಿರುವೆಯೋ ಏನು!

**ದೇ. ದೂ.**— ನಾನು ಈ ಸ್ವರ್ಗದ ಬಾಗಿಲನ್ನು ಕಾಯುವ ದೇವದೂತ! ಇಲ್ಲಿ ವಂಚನೆಯ ಸುಳಿವಿಲ್ಲ. ನೀನದನ್ನು ಬಿಸುಟಿಬಿಡು. ಅದ ಕ್ಕಾಗಿ ನಾನೇ ನಿನಗೆ ನೆರವಾಗುತ್ತೇನೆ ಬೇಕಾದರೆ.

**ಸ್ವ. ಜೀ.**— ನಾನೆಂದೂ ಹೆರವರ ನೆರವಿಗಾಗಿ ನೆರಳಿದವಳಲ್ಲ!

**ದೇ. ದೂ.**— ಭೋಗಕ್ಕೆ ಬೇಕಾಗದ ನೆರವು ತ್ಯಾಗಕ್ಕೆ ಬೇಕೇ ಬೇಕಾ ಗುತ್ತದೆ. ಅದನ್ನು ಕಳಚಿ ಕಿತ್ತೊಗೆದು ಬಿಡು.

**ಸ್ವ. ಜೀ.**— ಇಲ್ಲ, ಇಲ್ಲ; ಎಂದಿಗೂ ಸಾಧ್ಯವಿಲ್ಲ (ಮುಸುಕನ್ನು ಮತ್ತಿಷ್ಟು ಅವಚುವಳು.)

ದೇ. ದೂ.— ಹಾಗಾದರೆ ಉಪಾಯವಿಲ್ಲ, ಮಗಳೇ! (ಹಿಂದಿರುಗುತ್ತ) ಈ ಅಂತರಾಳದ ಮಿಟಿಮಿಟಿ ತ್ರಿಶಂಕುಸ್ಥಾನವನ್ನು ನೀನು ದಾಟಲಾರೆ. ಜೋತಾಡುತ್ತಿರು ಇಲ್ಲಿಯೇ!

ಸ್ವ. ಜೀ.— ಇಲ್ಲಿಲ್ಲ ದೇವದೂತ! ಈ ಸೀಮೆಗೆ ಸೇರಿದಾಗಿನಿಂದ ನನಗೆ ಸ್ವರ್ಗದಾಸೆ ಹೆಚ್ಚುತ್ತಲಿದೆ..... ಆದರೆ.... ಆದರೆ.... ಇತ್ತ ಇದನ್ನೂ ಬಿಡಲಾರೆ; ಅತ್ತ ಅದನ್ನು ಬಿಡಲಾರೆ. (ಧ್ಯಾನಿಸಿ) ಆಗಲಿ, ಆಗಲಿ; ಯತ್ನಿಸುತ್ತೇನೆ. ಇದರ ತ್ಯಾಗ ಎಷ್ಟೇ ಅಸಾಧ್ಯವಾದರೂ ಯತ್ನಿಸುತ್ತೇನೆ. ನೆರವಾಗು, ದೇವದೂತ; ನೆರವಾಗು! (ದೇವದೂತ ಹತ್ತರ ಬರುತ್ತಾನೆ; ಅವಳು ಪ್ರಯಾಸದಿಂದ, ಆದರೂ ದೃಢಮುದ್ರೆಯಿಂದ ಮೆಲ್ಲನೆ ಮುಸುಕನ್ನು ಕಳಚುತ್ತಾಳೆ. ಅವಳು ಶುಭ್ರಳಾಗಿ ಸತ್ವಶಾಲಿಯಾಗಿ ಶೋಭಿಸುತ್ತಾಳೆ; ಆನಂದದ ಹೆಚ್ಚಳದಿಂದ ಅವಳು ಮೈಮರೆಯುತ್ತಾಳೆ.) ಮುಕ್ತಿ, ಮುಕ್ತಿ; ನಾನು ಮುಕ್ತಳಾದೆ. ನನ್ನ ಜೀವ ಒಮ್ಮೆಲೆ ಹಗುರಾಗಿ ತೇಲುತ್ತಿರುವಂತೆ ಎನಿಸುತ್ತಿದೆ. ನನ್ನ ಮನಸ್ಸೀಗ ಸಂತೃಪ್ತಿಯ ಸೆಲೆಯಾದಂತಿದೆ; ತಂಪಿನ ತವರಾದಂತಿದೆ. ಹಾ! ಹಾ!— ಎಲ್ಲೆಲ್ಲೂ ಬೆಳಕು,— ಆನಂದ— ಶಾಂತಿ —ಪ್ರಶಾಂತಿ— ಚಿರ ಶಾಂತಿ! ದೇವದೂತ, ನನಗೆ ತ್ಯಾಗದ ಶಕ್ತಿಯಿತ್ತು ಮುಕ್ತಿಯ ಮಾರ್ಗ ತೋರಿದ್ದಕ್ಕಾಗಿ ನಿನಗೆ ತಲೆಬಾಗುತ್ತೇನೆ ತಂದೇ! ನಾನೀಗ ವಿಶ್ವದಲ್ಲಿ ವಿಲೀನಳಾದಂತೆ ನನಗೆನ್ನಿಸುತ್ತದೆ. ಆಹಾ, ಆಹಾ; ತೆರೆಯಿತು ಸ್ವರ್ಗದ್ವಾರ; ಪ್ರೇಮದ ಪಾರಾವಾರ! ಏರಿಕೆಯ ದಾರಿ ಎಳೆಯುತ್ತಲಿದೆ..... ಹೊರಟೆ.... ಹೊರಟೆ— (ಅವಳು ಮೇಲ್ಗೈ ಚಾಚಿ, ಮೊಟ್ಟಮೊದಲು ಜನ್ಮೋತ್ಸುಕ ಜೀವವು ಬಂದ ಮೇಲ್ಗಡೆಯ ಮೂಲೆಯತ್ತ ಏರಿ ಸಾರಿ ಹೋಗುವಳು. ಅವಳು ಮುಂದರಿದಂತೆ ಆ ಮೂಲೆಯಲ್ಲಿ ಪ್ರಕಾಶ ಹೆಚ್ಚುವದು.)

ದೇ. ದೂ.— (ಈವರೆಗೂ ಯಾವುದೋ ಎಣಿಕೆಯಲ್ಲಿ ಮುಳುಗಿನಿಂತಿರುವ ಜನ್ಮೋತ್ಸುಕ ಜೀವವನ್ನು ಇಂಗಿತದ ದೃಷ್ಟಿಯಿಂದ ನೋಡುತ್ತ) ನೀನೂ ಹೊರಡುವ ಹೊತ್ತಾಯ್ತು ತಂಗೀ! ವಿಜಯಿಯಾಗು! ನಿನ್ನ ಆದೇಶ ನಿನಗೆ; ಅವಳದು ಅವಳಿಗೆ! ನಾನಷ್ಟು ಅವಳನ್ನು ಗಡಿದಾಟಿಸಿ ಬರುತ್ತೇನೆ! (ದೇವದೂತ ಸ್ವರ್ಗೋನ್ಮುಖ ಜೀವವನ್ನು ಹಿಂಬಾಲಿಸಿ ಹೋಗುತ್ತಾನೆ. ಜನ್ಮೋ

ತ್ಸುಕ ಜೀವ ಆತನನ್ನು ಕೆಲಹೊತ್ತು ಅನುಲಕ್ಷಿಸಿ ನೋಡಿ, ಆಮೇಲೆ ಮೆಲ್ಲನೆ ಮುಂದರಿದು ಆ ಮುಸುಕು ಬಿದ್ದಲ್ಲಿಗೆ ಬರುತ್ತಾಳೆ. ಮನದಲ್ಲಿ ಹಲವು ವಿಚಾರ-ತರಂಗಗಳೆದ್ದಿವೆ. ಅವನ್ನು ಪಾರ್ಶ್ವಸಂಗೀತ ಮೇಳೈಸುತ್ತಿದೆ.)

## ನೇಪಥ್ಯ–ಗೀತ

ಜೀವ ಜೀವಕ್ಕೆಲ್ಲ ಪ್ರತ್ಯೇಕವಾಗಿಹುದು
ಅಮರ ವಿಶ್ವಾಸದೊಂದಾದೇಶವೂ ।
ಜನ್ಮದವಕಾಶ, ಅವನತಿಯಲ್ಲ; ಅವತಾರ!
ಎಂಬ ನಂಬಿಕೆ ನಿತ್ಯ ಸಂದೇಶವೂ ॥

ಜ. ಜೀ.— (ವಿಚಾರ ಪರತೆಯಿಂದಲೇ) ಅವಳಿಗಿಂತ ನನ್ನ ದಾರಿ ಹೆಚ್ಚು ಬಿಕ್ಕಟ್ಟಿನದು. ಮೇಲಾಗಿ ಈವರೆಗೂ ನಾನು ಅರಿಯದ ಭಯ ವೊಂದು ನನ್ನನ್ನು ಬಿಗಿದು ಬೀಗುತ್ತಲಿದೆ........ಏನು ಮಾಡಲಿ.... ಏನು ಮಾಡಲಿ!....ನನ್ನ ಸಹಜತೆಯನ್ನೂ ಸರಲತೆಯನ್ನೂ ಅವಳು ತಿರಸ್ಕರಿಸಿದಳಲ್ಲಾ! ಜಗತ್ತಿನ ಜನರು ನನ್ನನ್ನೂ ತುದಿಬೆರಳಿನ ಮೇಲೆ ತಿರುಗಿಸುವರಂತೆ! ನನ್ನನ್ನು ನಗೆಗೀಡುಮಾಡುವರಂತೆ! (ಅಭಿಮಾನದ ಮುದ್ರೆಯಿಂದ) ಹಾಗಾದರೆ ಆ ಭೂಲೋಕದಲ್ಲಿಯ ನನ್ನ ಬಾಳು ಹಾಳಾದೀತು; ಹುಳ–ಹುಪ್ಪಡಿಗಿಂತ ಕೀಳಾದೀತು! ಅಂದಮೇಲೆ,.... (ಕೆಲಕಾಲ ವಿಚಾರಿಸಿ).... ಆದರೆ, ಒಂದು ವೇಳೆ, ....ಹಂ! ಸರಿ; ಅದೇ ಸರಿ!....ಹೇಗೂ ಅವಳು ಬಿಟ್ಟುಹೋದ ಈ ಮುಸುಕಿದೆಯಲ್ಲಾ! ಇದರಿಂದಲೇ ನನ್ನನ್ನು ನಾನು ಕಾಪಾಡಿ ಕೊಳ್ಳಬಹುದು;.....ಎಲ್ಲರನ್ನೂ ಗೆಲ್ಲಬಹುದು.... ಅದರಲ್ಲೇನು ತಪ್ಪು? ಆಗಲಿ; ಹಂ! ಅದೇ ಸರಿ; ಅದೇ ಸರಿ! ಎಂದರೆ ಆ ಸೃಷ್ಟಿಯ ನಾಟ್ಯರಂಗದಲ್ಲಿ ನನ್ನ ಲೀಲಾಜಾಲವನ್ನು ಹೂಡಲು ಅನುಕೂಲವಾಗುವದು. (ಅವಳು ಕಳ್ಳಹೆಜ್ಜೆಯಿಂದ ಮತ್ತಿಷ್ಟು ಮುಂದರಿದು ಮೆಲ್ಲನೆ ಮುಸುಕನ್ನೆತ್ತಿಕೊಂಡು ಧರಿಸುವಳು. ಆಗ ರಂಗದ ಬೆಳಕು ಮಸುಕಾ ಗುತ್ತ ಹೋಗುವದು. ಪಾರ್ಶ್ವಸಂಗೀತ ಪರಿಸ್ಥಿತಿಯ ವಿಪರ್ಯಾಸವನ್ನು ಸೂಚಿ ಸುತ್ತಿರುವದು.)

## ನೇಪಥ್ಯ–ಗೀತ

ನಾಟ್ಯರಂಗವಿದೆಂದು ಜೀವನವು ತೋರಿದರು,
ಇದು ತುಣುಕು-ತೇಪೆಗಳ ಚಾಪೆಯಲ್ಲಾ!
ನಿತ್ಯತೆಯನಂತತೆಯ ನಿರ್ವ್ಯಾಜ ಲೀಲೆಗಳ,
ಮಾಲೆಯಿದು; ಇದಕೆಂದು ಲೋಪವಿಲ್ಲಾ!!
ಶಾಶ್ವತದ ಸಂತಾನ; ಸಂತೃಪ್ತಿಯಾಧಾನ,
ಸಂತಸ ಸಮಾಧಾನಗಳ ವಿಧಾನ!
ಈ ಬಾಳಿನಲಿ ಮೇಳಗೊಂಡಾಗ ಕಂಡೀತು,
ಬಾಳು ಭೂವೈಕುಂಠವೆಂದು ಜಾಣ!!

ಜ. ಜೀ.— (ಮುಂದರಿಯುತ್ತ ಮುಸುಕನ್ನು ಪೂರಾ ಸರಿಪಡಿಸಿಕೊಂಡು) ಜಾಣರು! ಆ ಜಗತ್ತಿನಲ್ಲಿ ನನಗಿಂತ ಜಾಣರು ಇನ್ನಾರು! ಇಕಾ, ಈಗೆಲ್ಲಾ ಸರಿಯಾಯ್ತು. ನಾನೀಗ ಅಖಂಡ ಬಲಶಾಲಿ; ಅಪ್ರತಿಮ ಬುದ್ಧಿಶಾಲಿ ನಾನು; ಜಗದ ಜನರೆಲ್ಲರನ್ನೂ ತಲೆಮೆಟ್ಟಬಲ್ಲ ಶಕ್ತಿಶಾಲಿಯೂ ನಾನೇ!.... ಅಹಾ.... ಇದು ನನಗೆ ಎಷ್ಟು ಹಾಳತವಾಗಿ ಒಪ್ಪುತ್ತದಲ್ಲಾ! ಇದರಿಂದ ನನ್ನ ಅಸ್ತಿತ್ವವೇ ಅಮರವಾದಂತೆನ್ನಿಸುತ್ತದೆ. ಹಾ! ಹಾ! ಹಾ!.... ಇನ್ನೇನು, ಇನ್ನೇನು! ಗೆಲ್ಲುವೆ, ಗೆಲ್ಲುವೆ; ಜಗದ ಜಂಗುಳಿಯನ್ನಾಳುವ ರಾಣಿಯೇ ನಾನಾಗುವೆ. ಯಾರು ಉಳಿದರೇನು, ಅಳಿದರೇನು? ಯಾರು ಸತ್ತರೇನು, ಯಾರತ್ತರೇನು? ನನ್ನತನವನ್ನೇ ಹೆಚ್ಚಿಸುವೆ, ಭೂಲೋಕವನ್ನೇ ಬೆಚ್ಚಿಸುವೆ; ಕೀರ್ತಿ, ಗೌರವ, ಸಂಪತ್ತು, ಸೌಂದರ್ಯ, ಸುಖಸಂತಸಗಳನ್ನು ನನ್ನ ಕಿರಿಬೆರಳಿನಿಂದ ಕುಣಿದಾಡಿಸುವೆ. ನನ್ನ ಕಣ್ಣುಣಿತದಿಂದ ಸಾಗರಗಳನ್ನೇ ಉಕ್ಕಿಸುವೆ; ವೈ-ಮಣಿತದಿಂದ ಪರ್ವತಗಳನ್ನು ಬಗ್ಗಿಸುವೆ; ಕೈ ಹಣಿತದಿಂದ ದೇಶದೇಶಗಳ ಕೀರ್ತಿಯನ್ನು ಕುಗ್ಗಿಸುವೆ; ಎದುರಿಸಿದವರ ತಲೆ ತಗ್ಗಿಸುವೆ. ಇದೋ ಈಗ ನಾನು ನಾನೇ; ನಾನೇ ನಾನು! ಆ ಜಗತ್ತಿನ ಸುಖಭೋಗವನ್ನೆಲ್ಲ ಹಿಂಡಿ ಹೀರಿಬಿಡುವೆ. ಆಳುವೆ, ಜಗವನ್ನೇ ಆಳುವೆ. ಆಳಾಗುವವಳಲ್ಲ ನಾನು; ಆಳುವವಳು; ಹೊರುವವಳಲ್ಲಾ; ಹೇರುವವಳು. ಸಾಗುವೆನು; ಸಾಗುವೆನು; ನಿಜವಾಗಿಯೂ ವಿಜಯಿಯಾಗುವೆನು. (ಅವಳು

ಸ್ವರ್ಗೋನ್ಮುಖ ಜೀವ ಬಂದ ನಿಟ್ಟಿನಲ್ಲಿ ಅಹಂಕಾರದ ಉಬ್ಬಿನಿಂದ ಸೆಟೆದು ಸಾಗುವಳು; ಮರುಗಳಿಗೆಯಲ್ಲೇ ದೇವದೂತ ಮತ್ತೆ ಪ್ರವೇಶಿಸಿ, ಮುಸುಕು ಬಿದ್ದ ಸ್ಥಳದಲ್ಲಿ ಅದು ಇಲ್ಲವಂತಾಗಿರುವದನ್ನು ಬಗೆದು ವಿಷಣ್ಣನಾಗುವನು.)

ದೇ. ದೂ.— ಅಯ್ಯೋ ಆ ಮುಸುಕು ಇಷ್ಟರಲ್ಲೇ ಮಾಯವಾಗಿದೆಯಲ್ಲಾ. ಹಾಯ್ ಹಾಯ್, ಕೊನೆಗೆ ಅವಳೂ ಸೋತಳೇ! ಪ್ರೇಮದ ದಿವ್ಯ ಸಂದೇಶವನ್ನು ಆ ಜಗತ್ತಿನ ಜನರಿಗಾಗಿ ಒಯ್ಯಬೇಕೆಂಬ ಹಂಬಲವಿದ್ದ ಈ ಆತ್ಮವೂ ಸಹ ಇನ್ನೂ ಈ ಸ್ವರ್ಗದ ಸೀಮೆಯಲ್ಲಿರುವಾಗಲೇ ಎಂಥ ದುರ್ಲಾಲಸೆಗೆ ಗುರಿಯಾದಳಲ್ಲಾ! ಸತ್ಯದ ಬೆಂಬಲವಿದ್ದ ಈ ಆತ್ಮಕ್ಕೂ ಇಂತಹ ಪತನವಾಗಬೇಕೆ? ಆ ಮುಸುಕಿನ ಮಹಿಮೆ ಸತ್ಯ–ಪ್ರೇಮಗಳನ್ನೂ ಆವರಿಸಿಬಿಟ್ಟಿತೇ! (ಪೃಥ್ವಿಯತ್ತ ತಿರುಗಿ) ಹೇ ಜಗತ್ತೇ,.... ಮಾಯೆ, ಮೋಸ, ಒಣ ಹೆಮ್ಮೆ, ಡಂಭಾಚಾರಗಳ ತವರುಮನೆಯಾದ ನೀನು, ನಿನ್ನ ದಬ್ಬಾಳಿಕೆಯ ದಾಳಿಯನ್ನು ನಮ್ಮ ಸ್ವರ್ಗಕ್ಕೂ ಸೋಂಕಿಸಿಬಿಟ್ಟೆಯಾ! ಹಾಗಾದರೇನು ಒಂದು ದಿನ ಈ ಸತ್ಯಲೋಕವೂ ನಿನ್ನ ದಾಸ್ಯಕ್ಕೇ.... (ಅಷ್ಟರಲ್ಲಿ ಅಂತರಿಕ್ಷದಲ್ಲಿ ಒಂದು ಚಿಕ್ಕ ಪ್ರಕಾಶ ಹೊಳೆದಡಗುವದು) ಆಹಾ ಆಹಾ; ಮತ್ತೊಂದು ಆತ್ಮ ಆ ಜಗತ್ತಿನಲ್ಲಿ ಜನ್ಮತಾಳಲು ಹೊರಟಂತಿದೆ. ಇಂಥ ಆತ್ಮಗಳ ಎಷ್ಟು ಅವತಾರವಾದರೆ ಆ ಜಗತ್ತಿನ ಉದ್ಧಾರವಾದೀತು? ಅಲ್ಲಿಯ ದ್ವೇಷ, ಕೊಲೆ, ಸುಲಿಗೆ, ಅತ್ಯಾಚಾರಗಳಿಗೆ ಇವೂ ಬಲಿ ಬೀಳಲಾರವೇ! ಅನನ್ಯಮನಸ್ಕತೆ, ಅಖಂಡ ಸಂಕಲ್ಪಗಳ ಬಲವಿಲ್ಲದೆ ಇಂಥ ಅಬ್ಬಾನುಅಬ್ಜ ಆತ್ಮಗಳು ಆ ಮೋಹಾಂಧಕಾರದ ಜಗತ್ತನ್ನು ಮೇಲೆತ್ತಲಾರವು. ಉದುರಿದ ಚಿಕ್ಕೆಗಳಂತೆ ತೇಜವಡಗಿದ ಈ ಆತ್ಮಗಳಿಂದ ಆ ಜಡ ಜಗತ್ತಿನ ಉದ್ಧಾರವಾಗುವ ಬಗೆ ಹೇಗೆ! ಹಿಂದೆ ಅನಂತ ಪ್ರೇಮದ ಅಖಂಡ–ಜ್ಯೋತಿಯನ್ನು ಆ ಜಗತ್ತಿನಲ್ಲಿ ಸ್ಥಿರವಾಗಿ ಸ್ಥಾಪಿಸಿದ ಕೆಲವು ದಿವ್ಯಾತ್ಮರಾದ ಮಹಾತ್ಮರನ್ನು ನಾನೇ ಕಂಡಿದ್ದೇನೆ. ಕೋಟಿ ಕಿರಿಯಾತ್ಮಗಳಿಂದಾಗದ ಉದ್ಧಾರವನ್ನು ಒಬ್ಬ ಮಹಾತ್ಮ ಮಾಡಬಲ್ಲ! ಅಂತಹ ಮಹಾತ್ಮನೇ ಈ

ಉದುರಿದ ಚಿಕ್ಕೆಗಳನ್ನೂ ಉದ್ಧರಿಸಬಲ್ಲ! ಹೇ ಮಹಾತ್ಮ, ಹೇ ದಿವ್ಯಾತ್ಮ; ಇಂದಿನ ಜಗತ್ತು ನಿನಗಾಗಿ ಕಾದಿದೆ; ಏಳು, ಎದ್ದೇಳು ಮಹಾತ್ಮ!

(ಆಕಾಶದಲ್ಲಿ ಒಂದು ಮಹಾಪ್ರಕಾಶ ಕಂಡಂತಾಗುವದು; ದೇವದೂತನ ಕಣ್ಣು ಕುಕ್ಕಿದಂತಾಗಿ, ಆತ ಮೈಮರೆದು ಕೂಗುತ್ತ ಆ ಬೆಳಕಿಗೆ ಬಾಗುವ. ಕೂಡಲೇ ಪಾರ್ಶ್ವಸಂಗೀತ ಉಕ್ಕೇರಿದಂತೆ ಏಳುವದು)

ಮಹಾತ್ಮಾನಸ್ತು ಮಾಂ ಪಾರ್ಥ, ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ॥

(ನೇಪಥ್ಯ-ಗೀತ ಮುಗಿಯುತ್ತಿರುವಂತೆ, ತೆರೆ.)

# ಕೆಲವು ಅಭಿಪ್ರಾಯಗಳು.

" ನಾಲ್ವತ್ತೆರಡರ ರಾಜಕೀಯ ಕ್ರಾಂತಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಈಗಾಗಲೇ ಅನೇಕ ಪುಸ್ತಕಗಳು ಕನ್ನಡದಲ್ಲಿ ಬಂದಿವೆ. ಆದರೆ........ ಸಾಮಾನ್ಯವಾಗಿ ಹಳ್ಳಿಯ ಹುಂಬರೆಂದು ನಾವು ಯಾರನ್ನು ಅಲ್ಲಗಳೆಯುತ್ತೇವೋ ಅಂತಹರ ರಕ್ತ ಧಮನಿಯಲ್ಲಿ ಎಂತಹ ದೇಶ-ಪ್ರೇಮದ ಬಿಂದುವಿರುತ್ತದೆಂಬದನ್ನು ವಿಶದವಾಗಿ ರಸವತ್ತಾಗಿ........ ಚಿತ್ರಿಸಿರುವುದು ಕೃಷ್ಣಕುಮಾರರೊಬ್ಬರೆ ಎನ್ನಬಹುದು......... ನಾಲ್ವತ್ತು ವರ್ಷ ಸರ್ವೀಸಿನಲ್ಲಿದ್ದ ಶಿವನಾಗಪ್ಪನಿಗೂ ಮಲ್ಲಣ್ಣನಿಗೂ ಒಂದು ಕಡೆ, ನಂತರ ನರಸಮ್ಮನಿಗೂ ಒಂದು ಕಡೆ, ನಡೆಯುವ ವಾಗ್ಯುದ್ಧ ಅದ್ಭುತವಾಗಿದೆ. ನಾಟಕಕಾರರ ವಾಗ್ವೈಖರಿಯಂತೂ ಮೆಚ್ಚುವಂತಹದಾಗಿದೆ. ಆ ಒಂದು ರಾತ್ರಿ ಮಲ್ಲಣ್ಣನು ಹುತಾತ್ಮನಾದ ಮಹಾರಾತ್ರಿ........ ಒಟ್ಟಿನಲ್ಲಿ ನಾಟಕ ತುಂಬ ಚೆನ್ನಾಗಿದೆ. **ಮುಸುಕು**........ ಒಂದು ಸಾಂಕೇತಿಕ ನಾಟಕ........ ಮಹಾತ್ಮರ ಜೀವನ ಸಂದೇಶವನ್ನು ಸಾರುವದೇ ಈ ನಾಟಕದ ಉದ್ದಿಶ್ಯವಾಗಿದೆ. ಈ ಕಾರ್ಯದಲ್ಲಿ ಇವರು ಜಯಪ್ರದರಾಗಿದ್ದಾರೆಂದು ಹೇಳಬಹುದು."

ಮುಂಬಯಿ,
೨೭—೨—೧೯೪೯

—" **ನುಡಿ** "

" ಜನ–ಜೀವನದಲ್ಲಿಯ ಎರಡು ಮನೋವೇಧಕ ಚಿತ್ರಗಳಿವು. ಲೇಖಕರು ಅತಿ ಪ್ರಭಾವಪೂರಿತವಾದ ಶೈಲಿಯಲ್ಲಿ ಎರಡು ಗಹನ ಜೀವಿತ ಸಮಸ್ಯೆಗಳನ್ನು ಓದುಗರ ಮುಂದಿಟ್ಟಿದ್ದಾರೆ. ಸ್ವತಂತ್ರಗೊಂಡ ಭಾರತ ದೇಶದಲ್ಲಿ ರಾಜಕಾರಣಿ, ಸಾಹಿತಿ, ಕಾರ್ಮಿಕ, ನೌಕರ, ಹೀಗೆ ಪ್ರತಿಯೊಬ್ಬರ ಗಮನವೂ ದೇಶಾಭ್ಯುದಯದ ಕಡೆ ಇರಬೇಕಾಗಿರುವಾಗ ಇಂತಹ ಕೃತಿಗಳು ಹೆಚ್ಚು ಹೆಚ್ಚು ರಚನೆ ಆಗುವದು ಆವಶ್ಯಕ. "

ಬೆಂಗಳೂರು
೨೩—೧—೪೯

—" **ತಾಯಿನಾಡು** "

" ........The real talent of the author is seen in the clever development of the theme, and the effecive portrayal of character. "

Udipi.
August 1949.

" **Human Affairs** "

........ನಾಟಕಗಳಲ್ಲಿ [illegible] ನನಗೆ ಮೆಚ್ಚಿಕೆಯಾಯಿತು. ವೀರ ಸನ್ನಿವೇಶದ ಹುರುಪೂ ರೌದ್ರವೂ ಅದರಲ್ಲಿ ಚೆನ್ನಾಗಿ ಚಿತ್ರಿತವಾಗಿವೆ."

ಬೆಂಗಳೂರು,
೨೭ — ೨ — ೪೯

ತೀ. ನಂ. ಶ್ರೀಕಂಠಯ್ಯ

"........ಎರಡೂ ಏಕಾಂಕಗಳನ್ನು ಓದಿದೆ...... ಪ್ರವಾಹದ ಸ್ವಚ್ಛಂದತನ ಹಾಗು ಸ್ವತಂತ್ರತೆ ಎರಡದರಲ್ಲಿಯೂ ಉತ್ತಮವಾಗಿದೆ. 'ಮುಸುಕು' ರಮ್ಯ ಕಲ್ಪನೆಯನ್ನು ಕಣ್ಣೆದುರು ತಪುತ್ತದೆ. ಅದು ಬಹಳ ಮಾರ್ಮಿಕವಾದುದು. ........'ತಿರುಗುಪ್ಪು' ಅದ್ಭುತವಾಗಿದೆ........ ಇಲ್ಲಿಯ ತಂತ್ರವೇಗ, ರುದ್ರತೆ, ಪಾತ್ರ ನಿರೂಪಣೆ, ಹಿನ್ನೆಲೆ, ಮುನ್ನೋಟ, ಇವೆಲ್ಲ ಕೂಡಿ ಒಂದು ನವನಿರ್ಮಾಣದ ಹೆಚ್ಚಳವನ್ನು ಪಡೆಯುತ್ತವೆ. ವೀರ ಆಂದೋಲನವನ್ನು ಕುರಿತು ಬರೆದ ಸಾಹಿತ್ಯದಲ್ಲಿ ಇದು ಉಚ್ಚತಮ ಸ್ಥಾನವನ್ನು ಪಡೆಯಬಲ್ಲುದು. ನಕಾಶಯುಕ್ತ ನಾಟಕ........ ಎಂತಹ ಕಲ್ಪಕತೆಯನ್ನು ಸಾಧಿಸಬಲ್ಲುದೆಂಬುದನ್ನು ಇಲ್ಲಿ ಕಂಡುಕೊಳ್ಳಬಹುದು."

ವೀಸನಗರ,
೨೭ — ೨ — ೪೯

ವಿ. ಕೃ. ಗೋಕಾಕ

"ಮೊದಲ ನಾಟಕ—'ತಿರುಗುಪ್ಪು' ನನಗೆ ತುಂಬ ಹಿಡಿಯಿತು. ಚೆನ್ನಾಗಿ ಬಂದಿದೆ. ಪ್ರತಿ ಮಾತಿನಲ್ಲೂ ಜೀವಕಳೆ ತುಂಬಿದೆ."

ಬೆಂಗಳೂರು,
೧೮ — ೧ — ೪೯

ಅರ್ಚಕ ವೆಂಕಟೇಶ

"ನೆರಳು ಬಿಸಿಲು ಉತ್ಸಾಹದಿಂದಲೇ ಓದಿದೆ. ತಿರುಗುಪ್ಪು ನಿಜವಾಗಿ ಬಹಳ ಚೆನ್ನಾಗಿದೆ. ರಂಗದ ಮೇಲೆ ಬಂದರೆ ಇದರ ಪರಿಣಾಮ ಬಹಳವಾದೀತು. ಮುಸುಕೂ ಚೆನ್ನಾಗಿದೆ. ನಿಮ್ಮನ್ನು ಈ ಕಾರ್ಯಕ್ಕಾಗಿ ಅಭಿನಂದಿಸುತ್ತೇನೆ. ಇದು ಬರಿಯ ಉಪಚಾರವಲ್ಲ......."

ಗೊರೂರು,
೧೨ — ೮ — ೪೮

ಗೊರೂರು ರಾಮಸ್ವಾಮಿ